WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೩, ೨೦೧೧ (ಆಶ್ವಯುಜ ೨೧, ಶಕ ವರ್ಷ ೧೯೩೩) | ಸಂಚಿಕೆ ೪೦ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಹೊಸ ಮರಳು ನೀತಿಯ ಅನುಷ್ಠಾನದ ಹಿನ್ನೆಲೆಯಲ್ಲಿ, ಮರಳು ಗಣಿಗುತ್ತಿಗೆ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಐ 84, ಎಂಎಂಎನ್, 2009 (ಭಾ-4) ದಿನಾಂಕ 03-05-2011
2. ಲೋಕೋಪಯೋಗಿ ಇಲಾಖೆಯ ಅ.ನ.ಪತ್ರ ಸಂಖ್ಯೆ: ಲೋಇ/160/ಬಿಎಂಎಸ್/2011, ದಿನಾಂಕ 13-07-2011.

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ 03-05-2011ರ ಆದೇಶದಲ್ಲಿ ಪ್ರಸ್ತುತ ಜಾರಿಗೆ ತರಲಾಗಿರುವ ಕರ್ನಾಟಕ ಮರಳು ನೀತಿ 2011 ರನ್ವಯ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ, 1994ಕ್ಕೆ ತಿದ್ದುಪಡಿ ಹೊರಡಿಸಿದ ನಂತರ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯು ಮರಳು ಗಣಿಗಾರಿಕೆಗೆ ಸಂಬಂಧಿಸಿದಂತೆ ಟೆಂಡರ್ ಕರೆಯುವ ಪ್ರಕ್ರಿಯೆಯನ್ನು ಕೈಗೊಳ್ಳಲು ಕಾಲಾವಕಾಶಬೇಕಾಗುವುದರಿಂದ, ರಾಜ್ಯದ ಅನೇಕ ಅಭಿವೃದ್ಧಿ ಕಾಮಗಾರಿಗಳಿಗೆ ಹಾಗೂ ಸಾರ್ವಜನಿಕರಿಗೆ ಅವಶ್ಯವಿರುವ ಮರಳಿನ ಲಭ್ಯತೆಯನ್ನು ಗಮನದಲ್ಲಿರಿಸಿಕೊಂಡು, ದಿನಾಂಕ 31-03-2011ರ ನಂತರ ಅವಧಿ ಬಾಕಿಯಿರುವ ಮರಳು ಬ್ಲಾಕ್‌ಗಳ ಗಣಿಗುತ್ತಿಗೆ ಅವಧಿಯನ್ನು ವಿಸ್ತರಿಸಲು ಹಾಗೂ ಈಗಾಗಲೇ ಗುತ್ತಿಗೆ ಅವಧಿ ಮುಕ್ತಾಯಗೊಂಡಿರುವ ಮರಳು ಬ್ಲಾಕ್‌ಗಳ ಗುತ್ತಿಗೆ ಅವಧಿಯನ್ನು ಪ್ರಮಾಣಾಧಾರಿತ (proportionate) ಶುಲ್ಕವನ್ನು ಕಟ್ಟಿಸಿಕೊಂಡು ದಿನಾಂಕ 15-06-2011 ರವರೆಗೆ ಮುಂದುವರೆಸಲು ಆದೇಶಿಸಲಾಗಿದೆ.

ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ, ಇವರ ಅ.ಸ. ಪತ್ರದಲ್ಲಿ ಹೊಸ ಮರಳು ನೀತಿಯನ್ವಯ ಲೋಕೋಪಯೋಗಿ ಇಲಾಖೆಯು ಕಾರ್ಯೋನ್ಮುಖವಾಗುವ ನಿಟ್ಟಿನಲ್ಲಿ ಹೊರಗುತ್ತಿಗೆ ಮೂಲಕ ಗುತ್ತಿಗೆದಾರರನ್ನು ನೇಮಿಸುವ ಹಾಗೂ ಇನ್ನಿತರೆ ಅಗತ್ಯ ಸಿದ್ಧತೆಗಳನ್ನು ಮಾಡಿಕೊಳ್ಳಲು ಕಾಲಾವಕಾಶ ಬೇಕಾಗಿರುವುದರಿಂದ ಹಾಲಿಯಿರುವ ವ್ಯವಸ್ಥೆಯನ್ವಯವೇ ಮರಳು ಗುತ್ತಿಗೆಗಳನ್ನು ಮುಂದುವರೆಸಿಕೊಂಡು ಹೋಗಲು ಅವಧಿಯನ್ನು ವಿಸ್ತರಿಸಲು ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 84 ಎಂಎಂಎನ್ 2009 (ಭಾ-4), ಬೆಂಗಳೂರು, ದಿನಾಂಕ : 14-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಪ್ರಸ್ತುತ ಜಾರಿಗೆ ತರಲಾಗಿರುವ ಕರ್ನಾಟಕ ಮರಳು ನೀತಿ 2011 ರನ್ವಯ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ, 1994ಕ್ಕೆ ತಿದ್ದುಪಡಿ ಹೊರಡಿಸಿದ ನಂತರ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯು ಮರಳು ಗಣಿಗಾರಿಕೆ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಟೆಂಡರ್ ಕರೆಯುವ ಪ್ರಕ್ರಿಯೆಯನ್ನು ಕೈಗೊಳ್ಳಲು ಕಾಲಾವಕಾಶ ಕೋರಿರುವುದರಿಂದ, ರಾಜ್ಯದ ಅನೇಕ ಅಭಿವೃದ್ಧಿ ಕಾಮಗಾರಿಗಳಿಗೆ ಹಾಗೂ ಸಾರ್ವಜನಿಕರಿಗೆ ಅವಶ್ಯವಿರುವ ಮರಳಿನ ಲಭ್ಯತೆಯನ್ನು ಗಮನದಲ್ಲಿರಿಸಿಕೊಂಡು, ದಿನಾಂಕ 15-06-2011ರವರೆಗೆ ವಿಸ್ತರಿಸಲಾದ ಅವಧಿಯನ್ನು ಮುಂದಿನ ಮೂರು ತಿಂಗಳಿಗೆ ಅಂದರೆ, ದಿನಾಂಕ 15-09-2011ರ ವರೆಗೆ ದಿನಾಂಕ 03-05-2011ರ ಆದೇಶದಲ್ಲಿನ ಮಾನದಂಡದ ಆಧಾರದ ಮೇಲೆಯೇ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ನಾಗಭೂಷಣ್**

ಪೀಠಾಧಿಕಾರಿ (ಗಣಿ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1811

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ದಿ ಮೈಸೂರು ಷುಗರ್ಸ್ ಕಂಪನಿ ಲಿಮಿಟೆಡ್, ಮಂಡ್ಯ ಈ ಕಾರ್ಖಾನೆಗೆ 2011-12ನೇ ಸಾಲಿನ ಬಂಡವಾಳ ವೆಚ್ಚಗಳಿಗಾಗಿ (CAPEX) ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ದಿ ಮೈಸೂರು ಷುಗರ್ ಕಂಪನಿ ಲಿಮಿಟೆಡ್ ಇವರ ಪತ್ರ ಸಂಖ್ಯೆ: ಎಂಎಸ್‌ಕೋ/ಎಂಡಿ/ಡಿಒ/2011/006, ದಿನಾಂಕ 2-6-2011.

**ಪ್ರಸ್ತಾವನೆ :**

ಮೇಲೆ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ದಿ ಮೈಸೂರು ಷುಗರ್ ಕಂಪನಿ ಲಿಮಿಟೆಡ್ ಇವರ ಪತ್ರದಲ್ಲಿ ಕಾರ್ಖಾನೆಯ ಆಧುನೀಕರಣ ಮತ್ತು ಉನ್ನತೀಕರಣದ ಸಲುವಾಗಿ ಬಂಡವಾಳ ವೆಚ್ಚಗಳಿಗಾಗಿ (CAPEX) ₹ 15.00 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ದಿ ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 35 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ : 15-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿ ಮೈಸೂರು ಷುಗರ್ ಕಂಪನಿ ಲಿಮಿಟೆಡ್, ಮಂಡ್ಯ ಈ ಕಾರ್ಖಾನೆಗೆ 2011-12ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4860-04-190-1-00-211 ಬಂಡವಾಳ ಹೂಡಿಕೆ (ಯೋಜನೆ) ಇದರಡಿಯಲ್ಲಿ ₹ 10.00 ಕೋಟಿಗಳನ್ನು (ಹತ್ತು ಕೋಟಿ ರೂಪಾಯಿಗಳು ಮಾತ್ರ) ಕಂಪನಿಯ 2011-12ನೇ ಸಾಲಿನ ಬಂಡವಾಳ ವೆಚ್ಚಗಳಿಗಾಗಿ (CAPEX) ಬಿಡುಗಡೆ ಮಾಡಲಾಗಿದೆ.

ಸಹಾಯಕ, ನಿರ್ದೇಶಕರು, (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ, ಮಂಡ್ಯ ಇವರು ಹಣ ಸೆಳೆಯುವ ಅಧಿಕಾರಿಯಾಗಿದ್ದು, ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/1073/ವೆಚ್ಚ-1/2011, ದಿನಾಂಕ 8-7-2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಿವಶಂಕರ್ ನಾಯಕ್, ಎಲ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1812

## ಶಿಕ್ಷಣ ಸಚಿವಾಲಯ

**ವಿಷಯ :** ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಉಪನ್ಯಾಸಕರುಗಳ ಹುದ್ದೆಗಳಿಗೆ ತಾತ್ಕಾಲಿಕವಾಗಿ ಗೌರವಧನದ ಆಧಾರದ ಮೇಲೆ ಉಪನ್ಯಾಸಕರ ಸೇವೆಯನ್ನು ಪಡೆಯುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 121, ಟಿಪಿಯು, 2010, ದಿನಾಂಕ 01-07-2010
2. ನಿರ್ದೇಶಕರು ಪದವಿ ಪೂವ್ ಶಿಕ್ಷಣ ಇಲಾಖೆ ರವರ ಪತ್ರ ಸಂಖ್ಯೆ: ಪಪೂಶಿಇ/ಸಿಬ್ಬಂದಿ-2 ಅತಿಥಿ 53/2011-12, ದಿನಾಂಕ 18-06-2011.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2010-11ನೇ ಶೈಕ್ಷಣಿಕ ಸಾಲಿನಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಗಳಿಗೆ ಆಯಾಯ ವಿಷಯಗಳಲ್ಲಿ ಸ್ನಾತಕೋತ್ತರ ಪದವಿಯಲ್ಲಿ ದ್ವಿತೀಯ ದರ್ಜೆಯಲ್ಲಿ ಉತ್ತೀರ್ಣರಾಗಿರುವ ಅಭ್ಯರ್ಥಿಗಳನ್ನು ತಾತ್ಕಾಲಿಕವಾಗಿ ಮಾಸಿಕ ಗೌರವಧನ ಆಧಾರದ ಮೇಲೆ ನಿಯಮಾನುಸಾರ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವವರೆಗೆ ಅಥವಾ ಶೈಕ್ಷಣಿಕ ವರ್ಷದ ಅಂತ್ಯದವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಮಾತ್ರ ತಾತ್ಕಾಲಿಕವಾಗಿ ನೇಮಕಾತಿ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ರಾಜ್ಯದಲ್ಲಿರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿಯಿರುವ ಒಟ್ಟು 2920 ಉಪನ್ಯಾಸಕರ ಹುದ್ದೆಗಳ ಪೈಕಿ 1765 ಹುದ್ದೆಗಳನ್ನು ನೇರನೇಮಕಾತಿ ಮೂಲಕ ಮತ್ತು ಉಳಿದ ಹುದ್ದೆಗಳಲ್ಲಿ ಬಡ್ತಿ ಕೋಟಾದ ಹುದ್ದೆಗಳನ್ನು ಅರ್ಹ ಪ್ರೌಢಶಾಲಾ ಸಹ ಶಿಕ್ಷಕರಿಂದ ಬಡ್ತಿಮೂಲಕ ತುಂಬುವವರೆಗೆ ಅಥವಾ 2011-12ರ ಶೈಕ್ಷಣಿಕ ವರ್ಷದ ಅಂತ್ಯದವರೆಗೆ, ಇವೆರಡರಲ್ಲಿ ಯಾವುದು ಮೊದಲೊ ಅಲ್ಲಿಯವರೆವಿಗೆ ತಾತ್ಕಾಲಿಕವಾಗಿ ಮಾಸಿಕ ಗೌರವಧನದ ಮೇಲೆ ಅತಿಥಿ ಉಪನ್ಯಾಸಕರನ್ನು ಆಯಾ ಕಾಲೇಜಿನ ಪ್ರಾಂಶುಪಾಲರು ಹಾಗೂ ಹಿರಿಯ ಉಪನ್ಯಾಸಕರು ಇರುವ ಸಮಿತಿಗೆ ತಾತ್ಕಾಲಿಕವಾಗಿ ಅತಿಥಿ ಉಪನ್ಯಾಸಕರನ್ನು ನೇಮಕಾತಿ ಮಾಡಿಕೊಳ್ಳಲು ಅಧಿಕಾರವನ್ನು ನೀಡುವಂತೆ ಪ್ರಸ್ತಾಪಿಸಿರುವುದನ್ನು ಪರಿಶೀಲಿಸಿ, 2011-12ನೇ ಶೈಕ್ಷಣಿಕ ಸಾಲಿನಲ್ಲಿ ಗೌರವಧನದ ಆಧಾರದ ಮೇಲೆ ಅತಿಥಿ ಉಪನ್ಯಾಸಕರನ್ನು ತಾತ್ಕಾಲಿಕವಾಗಿ ನೇಮಕಾತಿ ಮಾಡಿಕೊಳ್ಳಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 176 ಡಿಜಿಡಿ 2011, ಬೆಂಗಳೂರು, ದಿನಾಂಕ : 16-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ಪದವಿ ಪೂರ್ವ ಕಾಲೇಜುಗಳಲ್ಲಿ ಉಪನ್ಯಾಸಕರ ಕೊರತೆಯನ್ನು ನಿವಾರಿಸಲು ಖಾಲಿ ಇರುವ ಉಪನ್ಯಾಸಕರ ಹುದ್ದೆಗಳಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ತಾತ್ಕಾಲಿಕವಾಗಿ ಆಯಾ ವಿಷಯಗಳಲ್ಲಿ ಕನಿಷ್ಠ ದ್ವಿತೀಯ ದರ್ಜೆಯಲ್ಲಿ ಸ್ನಾತಕೋತ್ತರ ಪದವಿ ಪಡೆದ ಅಭ್ಯರ್ಥಿಗಳಿಂದ ಕಾರ್ಯಭಾರಕ್ಕನುಗುಣವಾಗಿ ವಾರದಲ್ಲಿ ನಾಲ್ಕು ಘಂಟೆಗಳಂತೆ ತಿಂಗಳಲ್ಲಿ 16 ಗಂಟೆಗಳಿಗೆ, ತಿಂಗಳಿಗೆ ಗರಿಷ್ಠ ರೂ. 2400/- (ಎರಡು ಸಾವಿರದ ನಾಲ್ಕು ನೂರು) ಹಾಗೂ ವಾರದಲ್ಲಿ 8 ಗಂಟೆಗಳಂತೆ ತಿಂಗಳಿಗೆ 32 ಗಂಟೆಗಳಿಗೆ,

ತಿಂಗಳಿಗೆ ಗರಿಷ್ಠ ರೂ. 4,800/–ಗಳಿಗೆ (ನಾಲ್ಕು ಸಾವಿರದ ಎಂಟುನೂರು) ಮೀರದಂತೆ ಗೌರವಧನವನ್ನು ಪಾವತಿಸುವ ಆಧಾರದಲ್ಲಿ ಉಪನ್ಯಾಸಕರ ಹುದ್ದೆಯ ಕರ್ತವ್ಯವನ್ನು ನಿರ್ವಹಿಸುವುದಕ್ಕಾಗಿ ಅವರ ಸೇವೆಯನ್ನು ಪಡೆಯಲು ಸರ್ಕಾರದ ಮಂಜೂರಾತಿ ನೀಡಿದೆ.

**ಷರತ್ತುಗಳು**

1) ಆಯಾ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದ ಪದವೀಧರರ ಸೇವೆಯನ್ನು ಆಯಾ ವಿಷಯದಲ್ಲಿ ಅತಿಥಿ ಉಪನ್ಯಾಸಕರಾಗಿ ತಾತ್ಕಾಲಿಕವಾಗಿ ನಿಗದಿತ ಅವಧಿಗೆ ಮಾತ್ರ ಮಾಸಿಕ ಗೌರವಧನದ ಪಾವತಿಯ ಮೇಲೆ ನೇಮಕಾತಿ ಮಾಡಿಕೊಳ್ಳತಕ್ಕದ್ದು.
2) ಮಂಜೂರಾದ ಹಾಗೂ ಖಾಲಿಯಿರುವ ಉಪನ್ಯಾಸಕರ ಹುದ್ದೆಗಳಿಗೆ ಮಾತ್ರ ಅತಿಥಿ ಉಪನ್ಯಾಸಕರ ಸೇವೆಯನ್ನು ಉಪಯೋಗಿಸಿಕೊಳ್ಳತಕ್ಕದ್ದು.
3) ಪ್ರತಿ ಅತಿಥಿ ಉಪನ್ಯಾಸಕರಿಗೆ ವಾರದಲ್ಲಿ ಗರಿಷ್ಠ 08 ಗಂಟೆಗಳ ಕಾರ್ಯಭಾರ ಮಾತ್ರ ನಿರ್ವಹಿಸಲು ಅನುಮತಿ ನೀಡತಕ್ಕದ್ದು.
4) ಈ ಅತಿಥಿ ಉಪನ್ಯಾಸಕರ ಸೇವೆಯನ್ನು ಖಾಯಂ ಉಪನ್ಯಾಸಕರ ನೇಮಕಾತಿ ಆಗುವವರೆವಿಗೆ ಅಥವಾ 2011–12ನೇ ಸಾಲಿನ ಶೈಕ್ಷಣಿಕ ವರ್ಷದ ಅಂತ್ಯದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಬಳಸಿಕೊಳ್ಳತಕ್ಕದ್ದು.
5) ಸರ್ಕಾರದ ನಿಯಮಗಳನ್ವಯ ಈ ಅವಧಿಯಲ್ಲಿ ಖಾಯಂ ಉಪನ್ಯಾಸಕರು ನೇಮಕಾತಿ ಹೊಂದಿ ಕರ್ತವ್ಯಕ್ಕೆ ಹಾಜರಾದ ತಕ್ಷಣದಿಂದ ಅತಿಥಿ ಉಪನ್ಯಾಸಕರ ಕಾರ್ಯನಿರ್ವಹಣೆಯು ತಂತಾನೆ ರದ್ದಾಗುತ್ತದೆ.
6) ಉಪನ್ಯಾಸಕರೇ ಇಲ್ಲದಿರುವ ಸ್ಥಳದಲ್ಲಿ ಹಾಗೂ ನಿಯೋಜನೆಯಂತಹ ಬದಲಿ ವ್ಯವಸ್ಥೆ ಮಾಡಲು ಸಾಧ್ಯವಿಲ್ಲದಿರುವ ಸ್ಥಳದಲ್ಲಿ ಮಾತ್ರ ಅತಿಥಿ ಉಪನ್ಯಾಸಕರ ಸೇವೆಯನ್ನು ತಾತ್ಕಾಲಿಕವಾಗಿ ಬಳಸಿಕೊಳ್ಳತಕ್ಕದ್ದು.
7) ಆಯಾಯ ವಿಷಯದಲ್ಲಿ ಅತಿಥಿ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸಲು ಒಬ್ಬರಿಗಿಂತ ಹೆಚ್ಚು ಅಭ್ಯರ್ಥಿಗಳು ಮುಂದೆ ಬಂದಲ್ಲಿ ಅಂತಹವರ ಪೈಕಿ ಆಯಾ ವಿಷಯದಲ್ಲಿನ ಸ್ನಾತಕೋತ್ತರ ಪದವಿಯಲ್ಲಿ ಹೆಚ್ಚಿನ ಅಂಕ ಪಡೆದ ಅಭ್ಯರ್ಥಿಯ ಸೇವೆಯನ್ನು ಆಯಾ ಕಾಲೇಜಿನ ಪ್ರಾಂಶುಪಾಲರು ಹಾಗೂ ಆಯಾ ಕಾಲೇಜಿನ ಹಿರಿಯ ಉಪನ್ಯಾಸಕರು ಇರುವ ಸಮಿತಿಯ ಮೂಲಕ ಆಯ್ಕೆ ಮಾಡಿ ಅತಿಥಿ ಉಪನ್ಯಾಸಕರ ಸೇವೆಯನ್ನು ಪಡೆಯತಕ್ಕದ್ದು.
8) ಪ್ರತಿ ಅತಿಥಿ ಉಪನ್ಯಾಸಕರಿಗೆ ಒಂದು ಗಂಟೆಯ ಬೋಧನಾ ಅವಧಿಗೆ ರೂ. 150–00 ರಂತೆ (ರೂ. ಒಂದು ನೂರಾ ಐವತ್ತು ಮಾತ್ರ) ಗೌರವ ಧನ ನೀಡಬಹುದು. ವಾರದಲ್ಲಿ ಗರಿಷ್ಟ 08 ಗಂಟೆಗಳ ಕಾರ್ಯಭಾರವನ್ನು ಮಾತ್ರ ಅತಿಥಿ ಉಪನ್ಯಾಸಕರಿಗೆ ವಹಿಸತಕ್ಕದ್ದು. ವಾರದಲ್ಲಿ 04 ಗಂಟೆಗಳಂತೆ ತಿಂಗಳಲ್ಲಿ 16 ಗಂಟೆಗಳ ಕಾರ್ಯಭಾರ ನಿರ್ವಹಿಸುವ ಅತಿಥಿ ಉಪನ್ಯಾಸಕರಿಗೆ ತಿಂಗಳಿಗೆ ಗರಿಷ್ಠ ರೂ. 2400–00 ಗಳನ್ನು ಹಾಗೂ ವಾರದಲ್ಲಿ 08 ಗಂಟೆಗಳಂತೆ ತಿಂಗಳಲ್ಲಿ 32 ಗಂಟೆಗಳ ಕಾರ್ಯಭಾರ ನಿರ್ವಹಿಸುವ ಅತಿಥಿ ಉಪನ್ಯಾಸಕರಿಗೆ ತಿಂಗಳಿಗೆ ಗರಿಷ್ಠ ರೂ. 4800–00 ಗಳಿಗೆ ಮೀರದಂತೆ ಗೌರವಧನವನ್ನು ನಿಗದಿಪಡಿಸತಕ್ಕದ್ದು. ಈ ಗೌರವಧನದ ಮೊತ್ತವನ್ನು ಆಯಾ ಕಾಲೇಜುಗಳ ಪ್ರಾಚಾರ್ಯರೇ ಸಂಬಂಧಿಸಿದ ಲೆಕ್ಕ ಶೀರ್ಷಿಕೆಯಿಂದ ಪಡೆದು ನಿಯಮಾನುಸಾರ ವಿತರಿಸತಕ್ಕದ್ದು.
9) ಅತಿಥಿ ಉಪನ್ಯಾಸಕರ ಸೇವೆಯನ್ನು ಬಳಸಿಕೊಳ್ಳುವಾಗ ಅವರಿಗೆ ಸಕ್ಷಮ ಪ್ರಾಧಿಕಾರದ ಆದೇಶವಿಲ್ಲದೆ ಯಾವುದೇ ಆದೇಶವನ್ನು ನೀಡಬಾರದು. ಗೌರವಧನ ವಿತರಣೆಗೆ ಸೂಕ್ತ ಸ್ವೀಕೃತಿಯನ್ನು ಪಡೆಯತಕ್ಕದ್ದು.
10) ಈ ರೀತಿ ಆಯ್ಕೆ ಆಗುವ ಅತಿಥಿ ಉಪನ್ಯಾಸಕರು, ಅತಿಥಿ ಉಪನ್ಯಾಸಕರಾಗಿ ಸಲ್ಲಿಸುವ ಸೇವೆಯು ಇತರೆ ಯಾವುದೇ ಸರ್ಕಾರಿ ಸೇವಾ ಸಕ್ರಮಾತಿಗೆ ಪರಿಗಣಿಸತಕ್ಕದ್ದಲ್ಲ.

ಈ ಗೌರವಧನವನ್ನು ವೇತನ ಲೆಕ್ಕ ಶೀರ್ಷಿಕೆ "2202–02–109–0–13 (ಯೋಜನೇತರ)" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ 12–07–2011ರ ಅನಧಿಕೃತ ಟಿಪ್ಪಣಿ ಸಂಖ್ಯೆ 527 ವೆಚ್ಚ 2011ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಹೆಚ್. ಕುರಿಯವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಸೇವೆಗಳು–1,2)

ಪಿ.ಆರ್. 1813

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿ ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳನ್ನು ಪ್ರಾಯೋಗಿಕವಾಗಿ ಗುಲ್ಬರ್ಗಾ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಅನುಷ್ಠಾನ ಸಂಸ್ಥೆಗಳನ್ನಾಗಿ ಪರಿಗಣಿಸುವ ಕುರಿತು.

**ಓದಲಾಗಿದೆ :**
1. ದಿನಾಂಕ : 12–10–2010 ರಂದು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
2. ದಿನಾಂಕ : 7–1–2011 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿದ ರೀತ್ಯಾ.
3. ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 167 ಉಖಾಯೋ 2010, ಬೆಂಗಳೂರು, ದಿನಾಂಕ : 19–2–2011.
4. ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 167 ಉಖಾಯೋ 2010, ಬೆಂಗಳೂರು, ದಿನಾಂಕ : 10–3–2011.
5. ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 167 ಉಖಾಯೋ 2010, ಬೆಂಗಳೂರು, ದಿನಾಂಕ : 21–5–2011.

**ಪ್ರಸ್ತಾವನೆ :**

ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಉಲ್ಲೇಖಿತ ಪತ್ರಗಳ ಆದೇಶದನ್ವಯ ರಾಜ್ಯದ ಒಟ್ಟು ಒಂಭತ್ತು ಜಿಲ್ಲೆಗಳಾದ ಬಾಗಲಕೋಟೆ, ಬೆಳಗಾಂ, ಚಿತ್ರದುರ್ಗ, ಧಾರವಾಡ, ಹಾಸನ, ತುಮಕೂರು, ಉತ್ತರ ಕನ್ನಡ, ರಾಯಚೂರು ಮತ್ತು ಮಂಡ್ಯ

ಇವುಗಳಲ್ಲಿ ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳನ್ನು ಪ್ರಾಯೋಗಿಕವಾಗಿ, ಅನುಷ್ಠಾನ ಸಂಸ್ಥೆಗಳೆಂದು ಪರಿಗಣಿಸಿ ಪರಿಣಾಮಕಾರಿಯಾಗಿ ಯೋಜನೆಯನ್ನು ಅನುಷ್ಠಾನಗೊಳಿಸಲು ಆದೇಶವನ್ನು ಹೊರಡಿಸಲಾಗಿತ್ತು. ಈಗ ಗುಲ್ಬರ್ಗಾ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳ ಕಾಮಗಾರಿಗಳನ್ನು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಅನುಷ್ಠಾನಗೊಳಿಸಲು, ಅನುಷ್ಠಾನ ಸಂಸ್ಥೆಗಳನ್ನಾಗಿ ಪರಿಗಣಿಸುವಂತೆ ಬೇಡಿಕೆಗಳು ಬಂದಿರುವುದರಿಂದ ಹಾಗೂ ಈಗಾಗಲೇ ಒಂಭತ್ತು ಜಿಲ್ಲೆಗಳಿಗೆ ಹೊರಡಿಸಿರುವ ಆದೇಶದ ಆಧಾರದ ಮೇಲೆ ಗುಲ್ಬರ್ಗಾ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಕೂಡ ಅರಣ್ಯ ಮತ್ತು ತೋಟಗಾರಿಕೆ ಇಲಾಖೆಯ ಕಾಮಗಾರಿಗಳ ಚಟುವಟಿಕೆಗಳನ್ನು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಅನುಷ್ಠಾನಗೊಳಿಸುವುದು ಅಗತ್ಯತೆ ಇರುವುದರಿಂದ ಸದರಿ ಇಲಾಖೆಗಳನ್ನು ಅನುಷ್ಠಾನ ಸಂಸ್ಥೆಗಳನ್ನಾಗಿ ಪರಿಗಣಿಸಿ ಆದೇಶವನ್ನು ಹೊರಡಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 167 ಉಖಾಯೋ 2010, ಬೆಂಗಳೂರು, ದಿನಾಂಕ : 8–7–2011.**

ಮೇಲ್ಕಂಡ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ ಪಂಚಾಯತ್ ರಾಜ್ ಸಂಸ್ಥೆಗಳು ಸೇರಿದಂತೆ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನವನ್ನು ಗುಲ್ಬರ್ಗಾ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳನ್ನು ಪ್ರಾಯೋಗಿಕವಾಗಿ ಅನುಷ್ಠಾನ ಸಂಸ್ಥೆಗಳೆಂದು ಪರಿಗಣಿಸಿ ಸಂಬಂಧಪಟ್ಟ ಇಲಾಖೆಗಳಿಗೆ ನಿಗದಿಪಡಿಸಿದ ಕಾಮಗಾರಿಗಳ ಅನುಷ್ಠಾನ ಕಾರ್ಯವನ್ನು ಮಾರ್ಗಸೂಚಿಗಳ ಅನ್ವಯ ಹಾಗೂ ಈ ಕೆಳಕಂಡ ನಿಯಮಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಕಟ್ಟುನಿಟ್ಟಾಗಿ ಪಾಲಿಸಲು ಈ ಮೂಲಕ ಆದೇಶಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಅನುಷ್ಠಾನ ಸಂಸ್ಥೆ | ಅನುಷ್ಠಾನಾಧಿಕಾರಿ |
|---|---|---|---|
| 1. | ಗುಲ್ಬರ್ಗಾ | 1. ಅರಣ್ಯ ಇಲಾಖೆ<br>2. ತೋಟಗಾರಿಕೆ ಇಲಾಖೆ | 1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ಗುಲ್ಬರ್ಗಾ<br>2. ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಗುಲ್ಬರ್ಗಾ |
| 2. | ಕೊಪ್ಪಳ | 1. ಅರಣ್ಯ ಇಲಾಖೆ<br>2. ತೋಟಗಾರಿಕೆ ಇಲಾಖೆ | 1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ಕೊಪ್ಪಳ.<br>2. ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಕೊಪ್ಪಳ |

1. ಅನುಷ್ಠಾನ ಸಂಸ್ಥೆಗಳು ಯೋಜನೆಯಡಿ ತಮ್ಮ ಇಲಾಖಾ ವತಿಯಿಂದ ಕೈಗೆತ್ತಿಕೊಳ್ಳಬಹುದಾದ ಕಾಮಗಾರಿಗಳನ್ನು ಯೋಜನೆಯ ಮಾರ್ಗಸೂಚಿಗಳನ್ವಯ ಸಂಬಂಧಪಟ್ಟ ಗ್ರಾಮ ಸಭೆಗಳಲ್ಲಿ ಪ್ರಸ್ತಾಪಿಸಿ ಗ್ರಾಮ ಸಭೆಗಳ ಶಿಫಾರಸ್ಸಿನೊಂದಿಗೆ ನಿಯಮಾನುಸಾರ ಸೂಕ್ತ ಅನುಮೋದನೆ ಪಡೆದು ಕಾಮಗಾರಿ ಗುಚ್ಚದಲ್ಲಿ ಸೇರಿಸತಕ್ಕದ್ದು.
2. ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳ ಕಾಮಗಾರಿಗಳು ಋತುಮಾನಾಧಾರಿತ ಕಾಮಗಾರಿಗಳಾಗಿರುವುದರಿಂದ ಅಂತಹ ಕಾಮಗಾರಿಗಳನ್ನು ಗ್ರಾಮ ಪಂಚಾಯತಿಯವರು ಕೈಗೆತ್ತಿಕೊಂಡಿದ್ದರೆ ಗ್ರಾಮ ಸಭೆಯ ಮೂಲಕ ಗ್ರಾಮ ಪಂಚಾಯತಿಯಿಂದ ಕ್ರಿಯಾ ಯೋಜನೆಯನ್ನು ಅನುಮೋದಿಸತಕ್ಕದ್ದು. ಇದೇ ರೀತಿ ತಾಲ್ಲೂಕು ಪಂಚಾಯತಿ/ಜಿಲ್ಲಾ ಪಂಚಾಯತಿಯವರು ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದರೆ ಕ್ರಿಯಾಯೋಜನೆಗೆ ತಾಲ್ಲೂಕು ಪಂಚಾಯತಿ/ಜಿಲ್ಲಾ ಪಂಚಾಯತಿಯವರು ಅನುಮೋದನೆ ನೀಡತಕ್ಕದ್ದು.
3. ಸದರಿ ಅನುಮೋದಿತ ಕಾಮಗಾರಿಗಳ ಸಂಬಂಧ ಯೋಜನೆಯಡಿ ನೀಡಲಾಗಿರುವ ಅಧಿಕಾರಗಳನ್ವಯ ಕಾಮಗಾರಿ ಅಂದಾಜು ಪಟ್ಟಿಗಳನ್ನು ತಯಾರಿಸಿ ತಾಂತ್ರಿಕ ಮತ್ತು ಆಡಳಿತಾತ್ಮಕ ಮಂಜೂರಾತಿಯನ್ನು ಪಡೆದಿರತಕ್ಕದ್ದು.
4. ಯೋಜನೆಯಡಿ ಸಲ್ಲಿಸಲಾಗುವ ಉದ್ಯೋಗ ಬೇಡಿಕೆಗೆ ಅನುಗುಣವಾಗಿ ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿ/ಪಂಚಾಯತ್ ಕಾರ್ಯದರ್ಶಿ ಇವರು ಸದರಿ ಇಲಾಖೆಗಳ ಅನುಮೋದಿತ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಕಾಮಗಾರಿಗಳನ್ನು ಹಂಚಿಕೆ ಮಾಡಿ ಅದಕ್ಕೆ ಅಗತ್ಯವಾಗಿ ಬೇಕಾಗಿರುವ NMR ಗಳನ್ನು MIS ಮೂಲಕ ಸಂಬಂಧಪಟ್ಟ ಅನುಷ್ಠಾನ ಸಂಸ್ಥೆಗಳಿಗೆ ವಿತರಿಸುವುದು.
5. ಅನುಷ್ಠಾನ ಸಂಸ್ಥೆಗಳಿಗೆ ಯೋಜನೆ ಅನುಷ್ಠಾನದಲ್ಲಿರುವ ಎಲ್ಲ ಪ್ರಕ್ರಿಯೆಗಳನ್ನು MIS ನಲ್ಲಿ ಅಳವಡಿಸಲು ಒಂದು ಪ್ರತ್ಯೇಕ login ಅವಕಾಶ ಕಲ್ಪಿಸಲಾಗಿರುತ್ತದೆ. ಸದರಿ login ಬಳಕೆ ಮಾಡಿಕೊಂಡು ಅನುಷ್ಠಾನ ಸಂಸ್ಥೆಗಳು ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿ/ಪಂಚಾಯತ್ ಕಾರ್ಯದರ್ಶಿ ಇವರು ವಿತರಿಸಿರುವ NMR ಗಳನ್ನು ಪಡೆಯಬಹುದಾಗಿದೆ.
6. MIS ನಿಂದ ಪಡೆದ NMR ಗಳನ್ನು ಕಾಮಗಾರಿ ನಿರ್ವಹಣೆಯಲ್ಲಿ ಬಳಸಿದ ನಂತರ ಸದರಿ ಮಾಹಿತಿಯನ್ನು MIS ನಲ್ಲಿ ಭರ್ತಿ ಮಾಡಲು ನಂತರ ಕೂಲಿ ಪಾವತಿಗಾಗಿ wage list ಮುದ್ರಿಸಲು ಹಾಗೂ ಕೂಲಿ ಪಾವತಿ ಮಾಡುವ ಸಂಪೂರ್ಣ ಜವಾಬ್ದಾರಿ ಅನುಷ್ಠಾನ ಸಂಸ್ಥೆಯದಾಗಿರುತ್ತದೆ.
7. ಸದರಿ ಕಾಮಗಾರಿಗೆ ಅನುಮೋದಿತ ಅಂದಾಜು ಪಟ್ಟಿಯಂತೆ ಅಗತ್ಯವಾಗಿ ಬೇಕಾಗಿರುವ ಸಾಮಗ್ರಿಯನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಗಳನ್ವಯ ಖರೀದಿ ಮಾಡಿ ಕಾಮಗಾರಿಯಲ್ಲಿ ಬಳಸಲು ಮತ್ತು ಪೂರ್ಣ ಸಾಮಗ್ರಿ ವಿವರಗಳನ್ನು ಹಾಗೂ ಪಾವತಿ ವಿವರಗಳನ್ನು ಕಡ್ಡಾಯವಾಗಿ MIS ನಲ್ಲಿ ದಾಖಲಿಸುವುದು ಅನುಷ್ಠಾನ ಅಧಿಕಾರಿಯವರ ಜವಾಬ್ದಾರಿಯಾಗಿರುತ್ತದೆ.
8. ಸದರಿ ಕಾಮಗಾರಿಗಳಿಗೆ ಸಂಬಂಧಪಟ್ಟ ಹಣ ಪಾವತಿಗೆ ಮುನ್ನ ನಿಯಮಾನುಸಾರ ಅನುಮೋದಿತ ಅಂದಾಜು ಪಟ್ಟಿಯನ್ವಯ ಹಾಗೂ ಕಾಮಗಾರಿ ನಿರ್ವಹಣೆ ಅನುಸಾರ ಅಳತೆ ಪುಸ್ತಕದಲ್ಲಿ ದಾಖಲಿಸುವುದು ಹಾಗೂ ದೃಢೀಕರಿಸುವುದರ ಜೊತೆಗೆ MIS ನಲ್ಲಿ ಸದರಿ ಮಾಹಿತಿಯನ್ನು ಭರ್ತಿ ಮಾಡುವುದು ಕಡ್ಡಾಯವಾಗಿರುತ್ತದೆ.

9. ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿ/ಪಂಚಾಯತ್ ಕಾರ್ಯದರ್ಶಿ ಇವರು ಕಾಮಗಾರಿಯನ್ನು ಹಂಚಿಕೆ ಮಾಡಿ ಸದರಿ ಕಾಮಗಾರಿಗೆ NMR ವಿತರಣೆ ಮಾಡುವ ಸಂದರ್ಭದಲ್ಲಿ ಕಡ್ಡಾಯವಾಗಿ ಸದರಿ ಕಾಮಗಾರಿಯ ಅನುಷ್ಠಾನಕ್ಕಾಗಿ ಬೇಕಾಗಿರುವ ಅನುದಾನವನ್ನು ಅನುಷ್ಠಾನ ಸಂಸ್ಥೆಗಳಿಗೆ ಜಿಲ್ಲಾ ಕಾರ್ಯಕ್ರಮ ಅಧಿಕಾರಿ/ಕಾರ್ಯಕ್ರಮ ಅಧಿಕಾರಿಗಳು ಬಿಡುಗಡೆ ಮಾಡತಕ್ಕದ್ದು ಮತ್ತು ಸದರಿ ಮಾಹಿತಿಯನ್ನು MIS ನಲ್ಲಿ ದಾಖಲಿಸತಕ್ಕದ್ದು. (ತುರ್ತು ಸಂದರ್ಭಗಳಲ್ಲಿ ರಾಜ್ಯ ಸರ್ಕಾರವು ನೇರವಾಗಿ ಅನುದಾನ ಬಿಡುಗಡೆ ಮಾಡಲು ಕ್ರಮ ವಹಿಸಬಹುದಾಗಿರುತ್ತದೆ).

10. ಅನುಷ್ಠಾನ ಸಂಸ್ಥೆಗಳು ಬಿಡುಗಡೆ ಮಾಡುವ ಪೂರ್ಣ ಅನುದಾನದ ಸ್ವೀಕೃತಿ ಹಾಗೂ ಸದರಿ ಅನುದಾನದಲ್ಲಿ ಭರಿಸಲಾಗುವ ವೆಚ್ಚ ಇತ್ಯಾದಿ ಮಾಹಿತಿಯನ್ನು ತಮ್ಮ login ಮೂಲಕವೇ MIS ನಲ್ಲಿ ಭರ್ತಿ ಮಾಡತಕ್ಕದ್ದು.

11. ಕಾಮಗಾರಿ ಪೂರ್ಣಗೊಳಿಸಿದ ಸಂಬಂಧ ಸೂಕ್ತ ದೃಢೀಕರಣ ಹಾಗೂ ಕಾಮಗಾರಿ ಅನುಷ್ಠಾನದಲ್ಲಿ ನಿರ್ವಹಿಸಬೇಕಾದ ಪೂರ್ಣ ದಾಖಲಾತಿಗಳನ್ನು ಕಡ್ಡಾಯವಾಗಿ ಪ್ರತ್ಯೇಕ ಕಡತದಲ್ಲಿ ನಿರ್ವಹಿಸತಕ್ಕದ್ದು ಮತ್ತು ಯೋಜನಾ ಸಂಬಂಧ ಪರಿಶೀಲನೆಗಾಗಿ ಬರುವ ಅಧಿಕಾರಿಗಳಿಗೆ ತಪ್ಪದೇ ಸದರಿ ದಾಖಲಾತಿಗಳನ್ನು ಹಾಜರು ಪಡಿಸತಕ್ಕದ್ದು.

12. ಯೋಜನೆಯ ಅನುಷ್ಠಾನ ಸಂಬಂಧ ಆರ್ಥಿಕ ವರ್ಷ ಅಂತಿಮಗೊಂಡ ಕೂಡಲೇ Chartered Accountant ರವರಿಂದ ಆಡಿಟ್ ಮಾಡಿಸಿ ವರದಿಯನ್ನು ಸಂಬಂಧಪಟ್ಟ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಲ್ಲಿಸತಕ್ಕದ್ದು.

13. ಕೇಂದ್ರ / ರಾಜ್ಯ ಸರ್ಕಾರವು ಯೋಜನಾ ಅನುಷ್ಠಾನ ಸಂಬಂಧ ಕಾಲಕಾಲಕ್ಕೆ ಹೊರಡಿಸಲಾಗುವ ನಿರ್ದೇಶನ/ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ. ಶಿವಶಂಕರ್**
**ನಿರ್ದೇಶಕರು,**
ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ
ಉದ್ಯೋಗ ಖಾತರಿ ಯೋಜನೆ
ಹಾಗೂ ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. ನಂ. 1815

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿನ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 35 ಸಸಿವಿ 2006, ದಿನಾಂಕ : 8–6–2006.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 339 ಸಅಸೇ 2010, ದಿನಾಂಕ : 9–7–2010.
3. ಅನಧಿಕೃತ ಟಿಪ್ಪಣಿ ಸಂ. ಲೋಇ 357 ಸೇಸಎ 2011, ದಿನಾಂಕ : 14–6–2011

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 8–6–2006 ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ. ನಂತರ ಈ ಹುದ್ದೆಯನ್ನು ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 9–7–2010 ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ : 10–6–2010 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ನಬಾರ್ಡ್ ಯೋಜನೆಯಡಿ ಇನ್ನು ರೂ. 600 ಕೋಟಿಗಳ ಮೊತ್ತದ ಕಾಮಗಾರಿಗಳು ಪ್ರಗತಿಯಲ್ಲಿದ್ದು, ನಬಾರ್ಡ್ ಶಾಖೆಯ ಅವಶ್ಯಕತೆಯಿರುವುದರಿಂದ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ದಿನಾಂಕ : 8–6–2011 ರಿಂದ ಮತ್ತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 338 ಸಅಸೇ 2011, ಬೆಂಗಳೂರು, ದಿನಾಂಕ : 14–7–2011**

ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ದಿನಾಂಕ : 8–6–2011 ರಿಂದ ಮತ್ತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–7–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು–3).

ಪಿ.ಆರ್. ನಂ. 1817

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ದಿ॥ ಆರ್. ನಾರಾಯಣ್ ಕೆ.ಎ.ಎಸ್. ಅಧಿಕಾರಿ ಹಾಗೂ ಇತರೆ 08 ಜನ ಆರೋಪಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 45 ಎಸ್‌ಇಎನ್ 07, (ಸಿಆಸುಇ 75 ಕೆಇವಿ 2007) ದಿನಾಂಕ : 29–1–2008.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 45 ಎಸ್‌ಇಎನ್ 07, (ಸಿಆಸುಇ 75 ಕೆಇವಿ 2007) ದಿನಾಂಕ : 26–5–2009.
3. ವಿಚಾರಣಾಧಿಕಾರಿಗಳ ವರದಿ ದಿನಾಂಕ : 29–10–2009.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 45 ಎಸ್‌ಇಎನ್ 07, (ಸಿಆಸುಇ 75 ಕೆಇವಿ 2007) ದಿನಾಂಕ : 28–12–2010.
5. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಇವರ ಪತ್ರ ದಿನಾಂಕ : 1–6–2011 ಮತ್ತು 6–7–2011.

**ಪ್ರಸ್ತಾವನೆ :**

ಶ್ರೀ ದಿ॥ ಆರ್. ನಾರಾಯಣ್, ಕೆ.ಎ.ಎಸ್ ಅಧಿಕಾರಿ ಶ್ರೀ ಕೆ. ನಾರಾಯಣಸ್ವಾಮಿ, ಶ್ರೀ ಎನ್.ಹೆಚ್. ಸದಾಶಿವರಾವ್, ಶ್ರೀ ಮೊಹಿನುದ್ದೀನ್, ಶ್ರೀ ಮಹ್ಮದ್ ಅಲ್ತಫ್ ಪಾಷಾ, ಶ್ರೀ ಸಿ. ದೇವೇಗೌಡ, ಶ್ರೀ ಕೆ. ಯಲ್ಲಯ್ಯ, ಶ್ರೀ ಚಿಂತಾಮಣಿ ಶ್ರೀ ಡಿ. ಶಿವರಾಮಯ್ಯ ಇವರುಗಳು ಚಿಕ್ಕನಾಯಕನಹಳ್ಳಿ ತಾಲ್ಲೂಕು ಕಛೇರಿಯಲ್ಲಿ ಕ್ರಮವಾಗಿ ತಹಸಿಲ್ದಾರ್ ರಾಜಸ್ವ ನಿರೀಕ್ಷಕ ಗ್ರಾಮ ಲೆಕ್ಕಿಗರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹಲವು ಗ್ರಾಮಗಳಲ್ಲಿ ಸರ್ಕಾರಿ ಜಮೀನುಗಳನ್ನು ಕಾನೂನು ಬಾಹಿರವಾಗಿ ಮಂಜೂರು ಮಾಡಿರುವರೆಂಬ ಆರೋಪದ ಸಂಬಂಧ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಸರ್ಕಾರಿ ಆದೇಶದಲ್ಲಿ ಪ್ರಾದೇಶಿಕ ಆಯುಕ್ತರು ಬೆಂಗಳೂರು ವಿಭಾಗ ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಈ ಮಧ್ಯೆ ಶ್ರೀ ದಿ॥ ಆರ್. ನಾರಾಯಣ್, ಕೆ.ಎ.ಎಸ್. ಅಧಿಕಾರಿ ರವರು ದಿನಾಂಕ :3–9–2008 ರಂದು ನಿಧನ ಹೊಂದಿದ ಕಾರಣ, ಅವರ ವಿರುದ್ಧ ಆರೋಪಗಳ ಕುರಿತು ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಪ್ರಕರಣದಲ್ಲಿನ ಇತರೇ ಆರೋಪಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಮುಂದುವರೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ 2 ರ ಆದೇಶದಲ್ಲಿ ಆದೇಶಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ. (3) ರಲ್ಲಿ ಓದಲಾದ ದಿನಾಂಕ : 29–10–2009 ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿ ಶ್ರೀ ಎನ್.ಎಚ್. ಸದಾಶಿವರಾವ್, ಶ್ರೀ ಮೊಹಿನುದ್ದೀನ್, ಶ್ರೀ ಮಹಮದ್ ಅಲ್ತಾಫ್ ಪಾಷ, ಶ್ರೀ ಕೆ. ಯಲ್ಲಯ್ಯ ಹಾಗೂ ಶ್ರೀ ಡಿ. ಶಿವರಾಮಯ್ಯ ಇವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿದೆಯೆಂದು ಹಾಗೂ ಶ್ರೀ ಕೆ. ನಾರಾಯಣಸ್ವಾಮಿ, ಶ್ರೀ ದೇವೇಗೌಡ ಮತ್ತು ಶ್ರೀ ಚಿಂತಾಮಣಿ ಇವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿಯನ್ನು ನೀಡಿರುತ್ತಾರೆ.

ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ಅಧಿಕಾರಿಗಳಿಗೆ ಎರಡನೇ ಕಾರಣ ಕೇಳುವ ನೋಟೀಸ್ ಮೂಲಕ ಒದಗಿಸಲಾಗಿತ್ತು. ಇದಕ್ಕೆ ಉತ್ತರವಾಗಿ ಶ್ರೀ ಮೊಹಿನುದ್ದೀನ್, ಶ್ರೀ ಮಹಮದ್ ಅಲ್ತಾಫ್ ಪಾಷ, ಶ್ರೀ ಕೆ. ಯಲ್ಲಯ್ಯ ಹಾಗೂ ಶ್ರೀ ಡಿ. ಶಿವರಾಮಯ್ಯರವರು ಉತ್ತರ ನೀಡಿ ತಾವುಗಳು ಅರ್ಜಿದಾರರೊಂದಿಗೆ ಷಾಮೀಲಾಗಿ ಭೂ ಮಂಜೂರಾತಿ ಮಾಡಿರುವುದಿಲ್ಲವೆಂದು ಕೇವಲ ಕಡತದಲ್ಲಿ ವಿವರಗಳನ್ನು ನಮೂದಿಸಿ ಸಲ್ಲಿಸಿದ್ದು, ಈ ವಿವರಗಳು ಸರಿಯಾಗಿಲ್ಲದಿದ್ದಲ್ಲಿ ಕಡತವನ್ನು ತಮಗೆ ಹಿಂತಿರುಗಿಸಿ ಮಾಹಿತಿಯನ್ನು ಒದಗಿಸುವಂತೆ ಅಂದಿನ ತಹಶೀಲ್ದಾರ್‌ರವರು ಕೋರದೆ, ಇವರುಗಳು ಒದಗಿಸಿದ ಮಾಹಿತಿ ಆಧಾರದ ಮೇಲೆ ಭೂ ಮಂಜೂರು ಮಾಡಿ ಆದೇಶ ಹೊರಡಿಸಿರುವ ಕಾರಣ ಯಾವುದೇ ದುರ್ನಡತೆ ಎಸಗಿರುವುದಿಲ್ಲವೆಂದು ತಿಳಿಸುತ್ತಾ ತಮ್ಮನ್ನು ಆರೋಪಗಳಿಂದ ಮುಕ್ತಗೊಳಿಸಲು ಕೋರಿದ್ದಾರೆ.

ಇದನ್ನು ಸರ್ಕಾರವು ಪರಿಶೀಲಿಸಿ ಈ ಆರೋಪಿತರು ಜಮೀನಿನ ಮಂಜೂರಾತಿಗಾಗಿ ಕಡತಗಳನ್ನು ತಯಾರಿಸುವಾಗ ಕೆಲವು ಮುಖ್ಯವಾದ ಮಾಹಿತಿಗಳನ್ನು ನಮೂದಿಸಿಲ್ಲದೇ ಇರುವುದರಿಂದ ಅನರ್ಹ ವ್ಯಕ್ತಿಗಳಿಗೂ ಕೂಡ ಜಮೀನು ಮಂಜೂರಾತಿ ಮಾಡಿರಬಹುದೆಂಬ ಅಭಿಪ್ರಾಯದೊಂದಿಗೆ ಈ ಮಂಜೂರಾತಿಗೆ ಸಂಬಂಧಪಟ್ಟಂತೆ ಆರೋಪಗಳು ಮಾಡಲಾಗಿದೆ. ಅಂದರೆ ನೌಕರರು ಕಡತಗಳನ್ನು ತಯಾರಿಸುವಾಗ ಅರ್ಜಿದಾರರು ಈಗಾಗಲೇ ಹೊಂದಿರುವ ಭೂಮಿಗಳ ವಿವರಗಳು ಅವರು ವ್ಯವಸಾಯಗಾರರೇ ಅಥವಾ ಇಲ್ಲವೇ, ಅವರ ವಾರ್ಷಿಕ ವರಮಾನ ಇತ್ಯಾದಿ ಎಲ್ಲಾ ವಿವರಗಳನ್ನು ಸಿದ್ಧಪಡಿಸಿ ಎಲ್ಲಾ ವಿವರಗಳೊಂದಿಗೆ ಮಂಜೂರಾತಿ ಸಮಿತಿ ಮುಂದೆ ಸಲ್ಲಿಸಬೇಕಾಗುತ್ತದೆ. ಈ ಎಲ್ಲಾ ಮಾಹಿತಿಗಳಿಲ್ಲದೇ ಇದ್ದರೆ ದರಖಾಸ್ತು ಸಲ್ಲಿಸಿರುವ ವ್ಯಕ್ತಿಯು ಜಮೀನನ್ನು ಪಡೆಯಲು ಅರ್ಹರೇ ಅಥವಾ ಇಲ್ಲವೇ ಎಂಬುದನ್ನು ಭೂ ಮಂಜೂರಾತಿ ನಿಯಮಗಳನ್ವಯ ನಿರ್ಧರಿಸಲು ಸ್ಪಷ್ಟವಾದ ಮಾಹಿತಿ ಇರದ ಕಾರಣ ಇವರ ವಿರುದ್ಧದ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗುವುದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಳ್ಳಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ವಿಚಾರಣಾಧಿಕಾರಿಗಳ ವರದಿಯಂತೆ ಶ್ರೀ ಕೆ. ನಾರಾಯಣಸ್ವಾಮಿ, ಅಂದಿನ ಪ್ರ.ದ.ಸ., ಶ್ರೀ ಸಿ. ದೇವೇಗೌಡ ಅಂದಿನ ಗ್ರಾಮ ಲೆಕ್ಕಿಗರು ಮತ್ತು ಶ್ರೀ ಚಿಂತಾಮಣಿ ಅಂದಿನ ಗ್ರಾಮ ಲೆಕ್ಕಿಗರು ಇವರ ವಿರುದ್ಧ ಮಾಡಿರುವ ಆಪಾದನೆಗಳನ್ನು ಕೈ ಬಿಟ್ಟು ಅವರನ್ನು ಆರೋಪಗಳಿಂದ ಮುಕ್ತಗೊಳಿಸಲು ತೀರ್ಮಾನಿಸಲಾಗಿದೆ. ಮುಂದುವರೆದು ಆರೋಪಗಳು ರುಜುವಾತಾಗಿರುವ ಆರೋಪಿತರ ಪೈಕಿ ಶ್ರೀ ಎನ್.ಎಚ್. ಸದಾಶಿವರಾವ್ ಇವರ ವಿಳಾಸವು ಪತ್ತೆಯಾಗದೇ ಇರುವುದರಿಂದ ಇವರ ವಿರುದ್ಧ ವಿಧಿಸಬಹುದಾದ ದಂಡನೆಯನ್ನು ಕಾಯ್ದುಕೊಳ್ಳಲು ತೀರ್ಮಾನಿಸಿದೆ. ಉಳಿದಂತೆ ಶ್ರೀ ಮಹಮದ್ ಅಲ್ತಾಫ್ ಪಾಷ, ಹಿಂದಿನ ರಾಜಸ್ವ ನಿರೀಕ್ಷಕರು ಹಾಗೂ ಸೇವೆಯಿಂದ ನಿವೃತ್ತಿ ಹೊಂದಿರುವ ಆಪಾದಿತರಾದ ಶ್ರೀ ಮೊಹಿನುದ್ದೀನ್, ಶ್ರೀ ಕೆ.ಯಲ್ಲಯ್ಯ ಹಾಗೂ ಶ್ರೀ ಡಿ. ಶಿವರಾಮಯ್ಯ ಇವರುಗಳಿಗೆ ದಂಡನೆ ವಿಧಿಸಲು ತೀರ್ಮಾನಿಸಿದೆ. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಆದೇಶದಲ್ಲಿ ಶ್ರೀ ಕೆ. ನಾರಾಯಣಸ್ವಾಮಿ, ಅಂದಿನ ಪ್ರ.ದ.ಸ. ಶ್ರೀ ಸಿ.ದೇವೇಗೌಡ, ಅಂದಿನ ಗ್ರಾಮ ಲೆಕ್ಕಿಗರು ಮತ್ತು ಶ್ರೀ ಚಿಂತಾಮಣಿ ಅಂದಿನ ಗ್ರಾಮ ಲೆಕ್ಕಿಗರು ಇವರ ವಿರುದ್ಧ ಮಾಡಿರುವ ಆಪಾದನೆಗಳು ಸಾಬೀತಾಗದ ಕಾರಣ ಇವರುಗಳನ್ನು ಆರೋಪಗಳಿಂದ ಆರೋಪಮುಕ್ತರನ್ನಾಗಿಸಿದೆ. ಹಾಗೂ ಆದೇಶದಲ್ಲಿ ಶ್ರೀ ಮಹಮದ್ ಅಲ್ತಾಫ್ ಪಾಷಾ, ಹಿಂದಿನ ರಾಜಸ್ವ ನಿರೀಕ್ಷಕರು, ಹಾಲಿ ವ್ಯವಸ್ಥಾಪಕರು, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ (ರಾಷ್ಟ್ರೀಯ ಹೆದ್ದಾರಿ) ಬೆಂಗಳೂರು ಇವರಿಗೆ ಇವರು ಪಡೆಯುತ್ತಿರುವ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ 3 ಹಂತಕ್ಕೆ ಒಂದು ವರ್ಷದ ಅವಧಿಗೆ ಕಡಿಮೆಗೊಳಿಸಿ, ಒಂದು ವರ್ಷದ ನಂತರ ಇವರ ವೇತನವು ಸಂಚಿತ ಪರಿಣಾಮವಿಲ್ಲದೇ ಪುನರ್ ಸ್ಥಾಪಿತವಾಗುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ.

ಮುಂದುವರೆದು ಶ್ರೀ ಮೊಹಿನುದ್ದೀನ್, ಶ್ರೀ ಕೆ. ಯಲ್ಲಯ್ಯ ಹಾಗೂ ಶ್ರೀ ಡಿ. ಶಿವರಾಮಯ್ಯ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ಶ್ರೀ ಮೊಹಿನುದ್ದೀನ್, ಹಿಂದಿನ ರಾಜಸ್ವ ನಿರೀಕ್ಷಕ ಇವರ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳು ರೂ. 500/–ಗಳನ್ನು 2 ವರ್ಷದ ಅವಧಿಗೆ ಕಡಿತಗೊಳಿಸಲು, ಶ್ರೀ ಕೆ. ಯಲ್ಲಯ್ಯ ಅಂದಿನ ಗ್ರಾಮ ಲೆಕ್ಕಿಗ ಇವರ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳು ರೂ. 300/–ಗಳನ್ನು 2 ವರ್ಷದ ಅವಧಿಗೆ ಕಡಿತಗೊಳಿಸಲು ಹಾಗೂ ಶ್ರೀ ಡಿ. ಶಿವರಾಮಯ್ಯ, ಅಂದಿನ ಗ್ರಾಮ ಲೆಕ್ಕಿಗ ಇವರ ನಿವೃತ್ತಿ ವೇತನದಲ್ಲಿ ರೂ. 300/–ಗಳನ್ನು 2 ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ನಿರ್ಧರಿಸಿದ್ದು, ಅದರಂತೆ ದಂಡನೆ ವಿಧಿಸುವ ಈ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ ಓದಲಾದ ಕ್ರಮ ಸಂಖ್ಯೆ : (5)ರ ಪತ್ರದಲ್ಲಿ ಸಹಮತಿ ನೀಡಿರುತ್ತದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 45 ಎಸ್‌ಇಎನ್ 2006 (ಸಿಆಸುಇ 75 ಕೆಇವಿ 2007), ಬೆಂಗಳೂರು, ದಿನಾಂಕ : 19ನೇ ಜುಲೈ 2011.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ಮೊಹಿನುದ್ದೀನ್, ಶ್ರೀ ಕೆ. ಯಲ್ಲಯ್ಯ ಹಾಗೂ ಶ್ರೀ ಡಿ. ಶಿವರಾಮಯ್ಯ ಇವರುಗಳಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಹೆಸರು | ದಂಡನೆ |
|---|---|---|
| 1. | ಶ್ರೀ ಮೊಹಿನುದ್ದೀನ್, ಹಿಂದಿನ ರಾಜಸ್ವ ನಿರೀಕ್ಷಕ | ಇವರ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳು ರೂ. 500/–ಗಳನ್ನು 2 ವರ್ಷದ ಅವಧಿಗೆ ಕಡಿತಗೊಳಿಸುವುದು |
| 2. | ಶ್ರೀ ಕೆ. ಯಲ್ಲಯ್ಯ, ಹಿಂದಿನ ಗ್ರಾಮ ಲೆಕ್ಕಿಗ | ಇವರ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳು ರೂ. 300/–ಗಳನ್ನು 2 ವರ್ಷದ ಅವಧಿಗೆ ಕಡಿತಗೊಳಿಸುವುದು |
| 3. | ಶ್ರೀ ಡಿ. ಶಿವರಾಮಯ್ಯ, ಹಿಂದಿನ ಗ್ರಾಮ ಲೆಕ್ಕಿಗ | ಇವರ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳು ರೂ. 300/–ಗಳನ್ನು 2 ವರ್ಷದ ಅವಧಿಗೆ ಕಡಿತಗೊಳಿಸುವುದು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸು ಇಲಾಖೆ (ಸೇವೆಗಳು–2).

ಪಿ.ಆರ್. ನಂ. 1818

## INFRASTRUCTURE DEVELOPMENT SECRETARIAT

**ADDENDUM**

**No. IDD 44 DIA 2011, BANGALORE, DATED 18-7-2011.**

**Read :** 1. G.o. No. IDD 44 DIA 2011, dated 21-6-2011.

**2.** Letter No. DGM (IPD-1)/753/2011-12 dated 2-7-2011 of the Deputy General Manager, KSIIDC.

In G.O. No. IDD 44 DIA 2011, dated 21-6-2011, the following shall be inserted in sub para 10 under the Empowered Committee, below (vii) as :

viii) Managing Director, KSIIDC - Member

ix) Dr. K.V. Raju, Economic Advisor to CM - Special invitee.

And the following para shall be inserted below sub para (xi) : as sub para (xii)

xii) To appoint KSIIDC as nodal agency for the International Convention centre project.

By Order and in the name of the Governor of Karnataka

**C.A. BABURAVINDRANATH PATEL**

Under Secretary to Government,

Infrastructure Development Department.

P.R. No. 1819

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೆಕ್ಸಿಕೋ ಮತ್ತು ಬ್ರೆಜಿಲ್ ದೇಶಗಳಿಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ನೇತೃತ್ವದ ನಿಯೋಗದ ಭೇಟಿಗೆ ಸಂಬಂಧಿಸಿದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸಿಆಸು ಇಲಾಖೆಯ ಆದೇಶ ಸಂಖ್ಯೆ : ಡಿಪಿಎಆರ್ 37 ಜಿಎಂ 2011, ದಿನಾಂಕ : 18–5–2011.

2. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ : ಎಇಪಿ :ಎ1:ಕಉಮಿ : ಅ.ಬಿ.02: 2011–12, ದಿನಾಂಕ : 31–5–2011.

**ಪ್ರಸ್ತಾವನೆ :**

ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ 2012 ರ ಪೂರ್ವಭಾವಿ ಸಿದ್ಧತೆಗಾಗಿ ರೋಡ್ ಶೋ ನಡೆಸಲು ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ನೇತೃತ್ವದಲ್ಲಿ ನಿಯೋಗವು ಮೇಲೆ (1) ರಲ್ಲಿ ಓದಲಾದ ಆದೇಶದನ್ವಯ ದಿನಾಂಕ : 8–5–2011 ರಿಂದ 26–5–2011 ರವರೆಗೆ ಮೆಕ್ಸಿಕೋ ಮತ್ತು ಬ್ರೆಜಿಲ್ ದೇಶಗಳಿಗೆ ಭೇಟಿ ನೀಡಿದ್ದು ಈ ಸಂಬಂಧ ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಒಟ್ಟು ರೂ. 47.87 ಲಕ್ಷಗಳ ವೆಚ್ಚ ತಗುಲಿರುತ್ತದೆ. ಆದ್ದರಿಂದ ಈ ವೆಚ್ಚವನ್ನು ಬಿಡುಗಡೆ ಮಾಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ ರವರು ಕೋರಿದ್ದು, ಅದರಂತೆ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು ರೂ. 47.87 ಲಕ್ಷಗಳನ್ನು ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 138 ಎಸ್‌ಪಿಐ 2011, ಬೆಂಗಳೂರು, ದಿನಾಂಕ : 18–7–2011.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಮೆಕ್ಸಿಕೋ ಮತ್ತು ಬ್ರೆಜಿಲ್ ದೇಶಗಳಿಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರ ನೇತೃತ್ವದ ನಿಯೋಗದ ಭೇಟಿಗೆ ಸಂಬಂಧಿಸಿದ ವೆಚ್ಚದ (ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಿರುವ ವಿವರಗಳಂತೆ) ಮೊತ್ತ ರೂ. 47.87 ಲಕ್ಷಗಳನ್ನು (ರೂ. ನಲವತ್ತೇಳು ಲಕ್ಷ ಎಂಭತ್ತೇಳು ಸಾವಿರಗಳು ಮಾತ್ರ) ಅಥವಾ ಇದಕ್ಕೆ ತಗುಲಿದ ನಿಖರ ವೆಚ್ಚಕ್ಕೆ ಸೀಮಿತಗೊಳಿಸಿ, ಕರ್ನಾಟಕ ಉದ್ಯೋಗ ಮಿತ್ರ ರವರಿಗೆ ಬಿಡುಗಡೆ ಮಾಡುವ ಸಲುವಾಗಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2852–80–800–0–46–125 ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ (ಯೋಜನೆ)" 2011–12 ರಡಿ ಭರಿಸತಕ್ಕದ್ದು.

ಮೇಲ್ಕಂಡ ಮೊತ್ತವನ್ನು ಕರ್ನಾಟಕ ಉದ್ಯೋಗ ಮಿತ್ರದ ವ್ಯವಸ್ಥಾಪಕ ನಿರ್ದೇಶಕರವರು ಸಲ್ಲಿಸುವ ಸ್ವೀಕೃತ ರಸೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ನಗದೀಕರಿಸಿಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ವಿ. ಶ್ರೀನಿವಾಸ ದೀಕ್ಷಿತ್**

ಪೀಠಾಧಿಕಾರಿ (ತಾಂತ್ರಿಕ ಕೋಶ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. ನಂ. 1820

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕರ್ನಾಟಕ ಉದ್ಯೋಗ ಮಿತ್ರವತಿಯಿಂದ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶಕ್ಕೆ ಪೂರ್ವಭಾವಿ ಸಿದ್ಧತೆ ಹಾಗೂ ಕರ್ಟನ್ ರೈಸರ್ ಕಾರ್ಯಕ್ರಮಗಳ ಆಯೋಜನೆಗೆ ಬೇಕಾದ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ : ಎಇಪಿ : ಎ1 : ಕಉಮಿ : ಅ.ಬಿ. 02 : 2011–12 ದಿನಾಂಕ : 31–05–2011 ಮತ್ತು 05–07–2011.

**ಪ್ರಸ್ತಾವನೆ :**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮೇಲೆ ಓದಲಾದ ಪತ್ರಗಳಲ್ಲಿ 2011–12ನೇ ಸಾಲಿನಲ್ಲಿ ಕರ್ನಾಟಕ ಉದ್ಯೋಗ ಮಿತ್ರದವರು ಈ ಕೆಳಕಂಡ ಕಾರ್ಯಕ್ರಮಗಳಿಗಾಗಿ ಒಟ್ಟು ರೂ. 113.48 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿದ್ದು, ಅದನ್ನು ಪರಿಶೀಲಿಸಿದ ಆಯುಕ್ತರು ಸದರಿ ಮೊತ್ತವನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

<table>
<tr><th>ಕ್ರ.ಸಂ.</th><th>ಕಾರ್ಯಕ್ರಮ</th><th>ಅನುದಾನ<br>(ರೂ. ಲಕ್ಷಗಳಲ್ಲಿ)</th></tr>
<tr><td>1</td><td>ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶಕ್ಕೆ ಪೂರ್ವಭಾವಿ ಸಿದ್ಧತೆಗಳಾದ ಬ್ರೋಚರ್ ಪ್ರಿಂಟಿಂಗ್ ಮೊದಲಾದ ಈ ಕೆಳಕಂಡ ವೆಚ್ಚಗಳು<br>
<table>
<tr><th>ಖರ್ಚಿನ ವಿವರ</th><th>ಮೊತ್ತ ರೂ. ಲಕ್ಷಗಳಲ್ಲಿ</th></tr>
<tr><td>ಜಾಹೀರಾತು</td><td>25.00</td></tr>
<tr><td>ಸಭೆಗಳು</td><td>5.00</td></tr>
<tr><td>ಮುದ್ರಣ ಸಾಮಗ್ರಿ (ಬ್ರೋಚರ್)</td><td>15.00</td></tr>
<tr><td>ಇತರೆ</td><td>5.00</td></tr>
<tr><td>ಒಟ್ಟು</td><td>50.00</td></tr>
</table></td><td>50.00</td></tr>
</table>

| | | |
|---|---|---|
| 2 | ಕರ್ಟನ್ ರೈಸರ್ ಕಾರ್ಯಕ್ರಮದ ಈ ಕೆಳಕಂಡ ವೆಚ್ಚಗಳು | |
| | **ಖರ್ಚಿನ ವಿವರ** / **ಮೊತ್ತ ರೂ. ಲಕ್ಷಗಳಲ್ಲಿ** | |
| | ಜಾಹೀರಾತು — 20.00 | |
| | ಕರ್ಟನ್ ರೈಸರ್ ಕಾರ್ಯಕ್ರಮದ ವೇದಿಕೆ, ಪ್ರಾತ್ಯಕ್ಷಿಕೆ ಪ್ರದರ್ಶನಕ್ಕೆ ವ್ಯವಸ್ಥೆ, ವಾಸ್ತವ್ಯ, ಸ್ಥಳೀಯ ವಾಹನ ವ್ಯವಸ್ಥೆ, ಮುದ್ರಣ ಸಾಮಗ್ರಿ ಮತ್ತು ಕಿರು ಕಾಣಿಕೆ — 30.00 | |
| | ಒಡಂಬಡಿಕೆಗೆ ಬೇಕಾಗುವ ಮುದ್ರಣ ಸಾಮಗ್ರಿ — 10.00 | |
| | ಇತರೆ — 3.48 | |
| | ಒಟ್ಟು — 63.48 | 63.48 |
| | **ಒಟ್ಟು** | **113.48** |

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2852-80-800-0-46-125 ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ" (ಯೋಜನೆ) 2011-12 ರಡಿ ಭರಿಸುವುದಾಗಿ ಆಯುಕ್ತರು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 123 ಎಸ್‌ಪಿಐ 2011, ಬೆಂಗಳೂರು, ದಿನಾಂಕ : 18-07-2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಈ ಕೆಳಕಂಡ ಕಾರ್ಯಕ್ರಮಗಳಿಗಾಗಿ ರೂ. 113.48 ಲಕ್ಷಗಳನ್ನು (ರೂ. ಒಂದು ನೂರ ಹದಿಮೂರು ಲಕ್ಷಗಳ ನಲವತ್ತೆಂಟು ಸಾವಿರಗಳು ಮಾತ್ರ) ಕರ್ನಾಟಕ ಉದ್ಯೋಗ ಮಿತ್ರ ರವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| ಕ್ರ.ಸಂ. | ಕಾರ್ಯಕ್ರಮ | ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶಕ್ಕೆ ಪೂರ್ವಭಾವಿ ಸಿದ್ಧತೆಗಳಾದ ಬ್ರೋಚರ್ ಪ್ರಿಂಟಿಂಗ್ ಮೊದಲಾದ ಈ ಕೆಳಕಂಡ ವೆಚ್ಚಗಳು | |
| | **ಖರ್ಚಿನ ವಿವರ** / **ಮೊತ್ತ ರೂ. ಲಕ್ಷಗಳಲ್ಲಿ** | |
| | ಜಾಹೀರಾತು — 25.00 | |
| | ಸಭೆಗಳು — 5.00 | |
| | ಮುದ್ರಣ ಸಾಮಗ್ರಿ (ಬ್ರೋಚರ್) — 15.00 | |
| | ಇತರೆ — 5.00 | |
| | ಒಟ್ಟು — 50.00 | 50.00 |
| 2 | ಕರ್ಟನ್ ರೈಸರ್ ಕಾರ್ಯಕ್ರಮದ ಈ ಕೆಳಕಂಡ ವೆಚ್ಚಗಳು | |
| | **ಖರ್ಚಿನ ವಿವರ** / **ಮೊತ್ತ ರೂ. ಲಕ್ಷಗಳಲ್ಲಿ** | |
| | ಜಾಹೀರಾತು — 20.00 | |
| | ಕರ್ಟನ್ ರೈಸರ್ ಕಾರ್ಯಕ್ರಮದ ವೇದಿಕೆ, ಪ್ರಾತ್ಯಕ್ಷಿಕೆ ಪ್ರದರ್ಶನಕ್ಕೆ ವ್ಯವಸ್ಥೆ, ವಾಸ್ತವ್ಯ, ಸ್ಥಳೀಯ ವಾಹನ ವ್ಯವಸ್ಥೆ, ಮುದ್ರಣ ಸಾಮಗ್ರಿ ಮತ್ತು ಕಿರು ಕಾಣಿಕೆ — 30.00 | |
| | ಒಡಂಬಡಿಕೆಗೆ ಬೇಕಾಗುವ ಮುದ್ರಣ ಸಾಮಗ್ರಿ — 10.00 | |
| | ಇತರೆ — 3.48 | |
| | ಒಟ್ಟು — 63.48 | 63.48 |
| | **ಒಟ್ಟು** | **113.48** |

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2852-80-800-0-46-125 ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ" (ಯೋಜನೆ) 2011-12ರಡಿ ಭರಿಸತಕ್ಕದ್ದು.

ಮೇಲ್ಕಂಡ ಮೊತ್ತವನ್ನು ಕರ್ನಾಟಕ ಉದ್ಯೋಗ ಮಿತ್ರದ ವ್ಯವಸ್ಥಾಪಕ ನಿರ್ದೇಶಕರವರು ಸಲ್ಲಿಸುವ ಸ್ವೀಕೃತ ರಸೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ನಗದೀಕರಿಸಿಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ವಿ. ಶ್ರೀನಿವಾಸ ದೀಕ್ಷಿತ್**

ಪೀಠಾಧಿಕಾರಿ (ತಾಂತ್ರಿಕ ಕೋಶ)

ಪಿ.ಆರ್. 1821 — ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಹಾಗೂ ಗುಟಗುದ್ದಿ ಸಣ್ಣ ನೀರಾವರಿ ಕೆರೆಗಳು ಒಡೆದು ಬೆಳೆ ಹಾನಿಯಾದ ಜಮೀನುಗಳಿಗೆ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011–12/2730.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಹಾಗೂ ಗುಟಗುದ್ದಿ ಸಣ್ಣ ನೀರಾವರಿ ಕೆರೆಗಳು ಒಡೆದು ರೈತರ ಬೆಳೆ ಹಾನಿಯಾದ ಜಮೀನುಗಳಿಗೆ ಪರಿಹಾರ ರೂ. 6,06,259–00ಗಳನ್ನು ಬಿಡುಗಡೆ ಮಾಡುವಂತೆ ಕೋರಿ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಹಾಗೂ ಗುಟಗುದ್ದಿ ಸಣ್ಣ ನೀರಾವರಿ ಕೆರೆಗಳು ಒಡೆದು ರೈತರ ಬೆಳೆ ಹಾನಿಯಾದ ಜಮೀನುಗಳಿಗೆ ಪರಿಹಾರ ನೀಡುವ ಕುರಿತು ಪ್ರಕೃತಿ ವಿಕೋಪ ಪರಿಹಾರ ನಿಧಿ ಮತ್ತು ರಾಷ್ಟ್ರೀಯ ವಿಪತ್ತು ಸಾದಿಲ್ವಾರು ನಿಧಿಯಡಿ ವೆಚ್ಚ ಭರಿಸುವ ಐಟಂಗಳ ಪರಿಷ್ಕೃತ ಪಟ್ಟಿ ಹಾಗೂ ವೆಚ್ಚದ ಮಾರ್ಗಸೂಚಿಗಳ ಬಗ್ಗೆ ಕಂದಾಯ ಇಲಾಖೆಯ ದಿನಾಂಕ : 30–11–2004ರ ಮಾರ್ಗಸೂಚಿಯಂತೆ ಹಾನಿಯಾದ ಬೆಳೆಗಳ ಪರಿಹಾರದ ವಿವರಗಳನ್ನು ತಯಾರಿಸಿದ್ದು, ವಿವರಗಳು ಕೆಳಕಂಡಂತಿದೆ :

| ಕ್ರ. ಸಂ. | ಗ್ರಾಮ | ಹಾನಿಗೊಳಗಾದ ಜಮೀನಿನ ರೈತರು | ಒಟ್ಟು ಕ್ಷೇತ್ರ ಗುಂಟೆಗಳಲ್ಲಿ | ಒಟ್ಟು ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | ಕಮತನೂರು | 127 | 7032 | 37571 |
| 2 | ಹೆಬ್ಬಾಳ | 96 | 7336 | 184083 |
| 3 | ಕಮತನೂರ | 127 | 5781.80 | 142940 |
| 4 | ಗೋಟೂರ | 123 | 3694 | 64616 |
| 5 | ಗವನಾಳ | 101 | 7178 | 177049 |
| | | | ಒಟ್ಟು | **606259** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 218 ಮಸಾವಿ 2010, ಬೆಂಗಳೂರು, ದಿನಾಂಕ : 18–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಹಾಗೂ ಗುಟಗುದ್ದಿ ಸಣ್ಣ ನೀರಾವರಿ ಕೆರೆಗಳು ಒಡೆದು ರೈತರ ಬೆಳೆ ಹಾನಿಯಾದ ಜಮೀನುಗಳಿಗೆ ಪರಿಹಾರ ನೀಡಲು ರೂ. 6,06,259–00 (ಆರು ಲಕ್ಷದ ಆರು ಸಾವಿರದ ಇನ್ನೂರ ಐವತ್ತೊಂಭತ್ತು ರೂ.ಗಳು ಮಾತ್ರ) ಗಳನ್ನು ಬಿಡುಗಡೆ ಮಾಡಲು ಸರ್ಕಾರವು ಆದೇಶಿಸಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 6,06,259/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010 ದಿನಾಂಕ : 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1822 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆ, ಕಾರವಾರ ತಾಲ್ಲೂಕಿನ ಚಿತ್ತಾಕುಲಾ ಗ್ರಾಮದ ಮಾವಿನಹಳ್ಳಕ್ಕೆ ಉಪ್ಪು ನೀರು ತಡೆಗೋಡೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/6385, ದಿನಾಂಕ : 03–12–2010.

**ಪ್ರಸ್ತಾವನೆ :**

ಉತ್ತರ ಕನ್ನಡ ಜಿಲ್ಲೆ, ಕಾರವಾರ ತಾಲ್ಲೂಕಿನ ಚಿತ್ತಾಕುಲಾ ಗ್ರಾಮದ ಮಾವಿನಹಳ್ಳಕ್ಕೆ ಉಪ್ಪು ನೀರು ತಡೆಗೋಡೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಕೋರಿದ್ದಾರೆ. ಹೆಚ್ಚಿನ ಪರಿಹಾರ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 24–09–1999.

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ : 27–04–2001.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ಚಿತ್ತಾಕುಲಾ ಗ್ರಾಮದ ಕೆಲವು ಸರ್ವೆ ನಂಬರ್‌ಗಳ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕಾರವಾರ ಹೆಚ್ಚುವರಿ ಸಿವಿಲ್ (ಹಿರಿಯ ವಿಭಾಗ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಗುಂಟೆಗೆ ರೂ. 19,500/–ಗಳನ್ನು ನಿಗದಿಪಡಿಸಿ ಮಾರುಕಟ್ಟೆ ದರದ ಮೇಲೆ ಶೇ. 30 ರಷ್ಟು ಸೋಲೇಷಿಯಂ ಹಾಗೂ ಶೇ. 9ರಂತೆ ಬಡ್ಡಿಯನ್ನು ಪ್ರಥಮ ವರ್ಷಕ್ಕೆ 4(1)ರ ಅಧಿಸೂಚನೆ ದಿನಾಂಕದಿಂದ ಪಾವತಿ ದಿನಾಂಕದವರೆಗೆ ತದನಂತರದ ಅವಧಿಗೆ ಶೇ.15ರಂತೆ ಬಡ್ಡಿಯನ್ನು ಪಾವತಿಸುವಂತೆ ಆದೇಶಿಸಿದೆ. ಈ ಆದೇಶದ ವಿರುದ್ಧ ಜಿಲ್ಲಾ ನ್ಯಾಯಾಲಯ, ಕಾರವಾರ ಇಲ್ಲಿ ಆರ್.ಎ. ಸಂಖ್ಯೆ : 82/10ನ್ನು ದಾಖಲಿಸಿದ್ದು, ಜಿಲ್ಲಾ ನ್ಯಾಯಾಲಯವು ಶೇ. 50ರಷ್ಟು ಪರಿಹಾರವನ್ನು ನೀಡುವಂತೆ ಆದೇಶಿಸಿದೆ.

ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಇ.ಪಿ. ಸಂಖ್ಯೆ | ಚಿತ್ತಾಕುಲಾ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ–ಸೆಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 31/02 | 69/09 | 1208 | 0–12–08 | 8,35,073–00 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 139 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 18–07–2011**

ಉತ್ತರ ಕನ್ನಡ ಜಿಲ್ಲೆ, ಕಾರವಾರ ತಾಲ್ಲೂಕಿನ ಚಿತ್ತಾಕುಲಾ ಗ್ರಾಮದ ಮಾವಿನಹಳ್ಳಕ್ಕೆ ಉಪ್ಪು ನೀರು ತಡೆಗೋಡೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 8,35,073–00 ಗಳನ್ನು (ಎಂಟು ಲಕ್ಷದ ಮೂವತ್ತೈದು ಸಾವಿರದ ಎಪ್ಪತ್ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.
4. ಬಿಡುಗಡೆಯಾಗಿರುವ ಮೊತ್ತವನ್ನು ಪ್ರಕರಣದ ಅಸಲು ಮೊತ್ತಕ್ಕೆ ಭರಿಸಿಕೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 8,35,073/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010 ದಿನಾಂಕ : 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1823

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಎಂ. ರಂಗನಾಥ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಜೆಆರ್‌ಓ(1)222/2010–11, ದಿನಾಂಕ : 02–05–2011.

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಡಾ॥ ಎಂ.ರಂಗನಾಥ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಇವರು ದಿನಾಂಕ : 25–07–2000 ರಂದು ಸೇವೆಗೆ ಸೇರಿದ್ದು, ವೈಯಕ್ತಿಕ ಕಾರಣಗಳಿಂದ ದಿನಾಂಕ : 01–11–2010 ರಿಂದ ಅನ್ವಯವಾಗುವಂತೆ ರಾಜೀನಾಮೆ ಸಲ್ಲಿಸಿ, ಅಂಗೀಕರಿಸುವಂತೆ ಕೋರಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವೆಂದು ಹಾಗೂ ಇವರು ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ದಿನಾಂಕ : 01–11–2010 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 210 ಹೆಚ್‌ಎಸ್‌ಹೆಚ್ 2011 ಬೆಂಗಳೂರು, ದಿನಾಂಕ : 15-07-2011.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಎಂ. ರಂಗನಾಥ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ: 01-11-2010 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1824 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** 6 ಖಾಯಂ ಲೋಕ್ ಅದಾಲತ್ ಸ್ಥಾಪನೆಯನ್ವಯ 2011-12ನೇ ಸಾಲಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಲಾ 57 ಎಲ್‌ಎಎಂ 2011 ದಿನಾಂಕ : 07-04-2010.
2. ಸರ್ಕಾರದ ಆದೇಶ ಸಂಖ್ಯೆ : ಲಾ 11 ಎಲ್‌ಎಡಿ 2011 ದಿನಾಂಕ : 29-04-2011.
3. ಕರಾಕಾಸೇ ಪ್ರಾಧಿಕಾರದ ಪತ್ರ ಸಂಖ್ಯೆ : ಪಿಎಲ್‌ಎ/ಗ್ರಾಂಟ್ಸ್-4/2011-12, ದಿನಾಂಕ : 02-05-2011, 11-05-2011 ಮತ್ತು 03-06-2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 07-04-2011ರ ಆದೇಶದಲ್ಲಿ ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಕ್ರಿಯಾಯೋಜನೆಗಳನ್ನು 2011-12ನೇ ಸಾಲಿನಲ್ಲಿ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ. 2011-12ನೇ ಸಾಲಿಗೆ ರೂ. 25 ಲಕ್ಷಗಳ ಅನುದಾನವನ್ನು ಆಯವ್ಯಯದಲ್ಲಿ (ಯೋಜನೆಗಳಡಿ) ಒದಗಿಸಲಾಗಿದ್ದು, ಮೇಲೆ (2)ರಲ್ಲಿ ಓದಲಾದ ದಿನಾಂಕ : 29-04-2011ರ ಸರ್ಕಾರದ ಆದೇಶದಲ್ಲಿ 6 ಖಾಯಂ ಲೋಕ್ ಅದಾಲತ್‌ಗಳ ನಿರ್ವಹಣೆ ಸಿಬ್ಬಂದಿ ವೆಚ್ಚ ಇತ್ಯಾದಿಗಾಗಿ ಮೊದಲನೇ ಕಂತಾಗಿ ರೂ. 6.25 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ ಮತ್ತು 2011-12ನೇ ಸಾಲಿಗೆ ಬಿಡುಗಡೆ ಮಾಡಿದ ರೂ. 6.25 ಲಕ್ಷಗಳ ಅನುದಾನಗಳನ್ನು ಖಾಯಂ ಜನತಾ ನ್ಯಾಯಾಲಯಗಳ ಸಿಬ್ಬಂದಿಗಳ ವೇತನ ಹಾಗೂ ಇತರೆ ಖರ್ಚು ವೆಚ್ಚಗಳಿಗಾಗಿ ಭರಿಸಲಾಗಿದೆ. ಖಾಯಂ ಜನತಾ ನ್ಯಾಯಾಲಯಗಳ ಸಿಬ್ಬಂದಿಗಳ ವೇತನ ಹಾಗೂ ಇತರೆ ಖರ್ಚು-ವೆಚ್ಚಗಳಿಗಾಗಿ 2011-12ನೇ ಸಾಲಿಗೆ ಉಳಿದ ರೂ. 18,75,000.00ಗಳನ್ನು 2ನೇ ಕಂತಿನಲ್ಲಿ ಪೂರ್ಣವಾಗಿ ಬಿಡುಗಡೆ ಮಾಡುವಂತೆ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳು ಮೇಲೆ (3)ರಲ್ಲಿ ಓದಲಾದ ದಿನಾಂಕ : 02-05-2011ರ ಪತ್ರದಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 11 ಎಲ್‌ಎಡಿ 2011, ಬೆಂಗಳೂರು ದಿನಾಂಕ : 15ನೇ ಜುಲೈ 2011.**

2011-12ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ 6 ಜಿಲ್ಲೆಗಳಲ್ಲಿ ಖಾಯಂ ಲೋಕ್ ಅದಾಲತ್‌ಗಳ ಸ್ಥಾಪನೆಯ ಕಛೇರಿಗಳಲ್ಲಿನ ಖರ್ಚು ವೆಚ್ಚಗಳ ನಿರ್ವಹಣೆಗೆ ಎರಡನೇ ಕಂತಾಗಿ ರೂ. 6.25 ಲಕ್ಷಗಳನ್ನು (ರೂಪಾಯಿ ಆರು ಲಕ್ಷಗಳು ಮತ್ತು ಇಪತ್ತೈದು ಸಾವಿರ ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2014-00-105-0-11-059 (ಯೋಜನೆ) ಅಡಿ ಭರಿಸುವುದು.

ಸದರಿ ಹಣವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ನಿಯಮಾನುಸಾರ ಬಳಸತಕ್ಕದ್ದು.

ಇದಕ್ಕೆ ಆಂತರಿಕ ಸಲಹೆಗಾರರು, ವಸತಿ ನಗರಾಭಿವೃದ್ಧಿ ಹಾಗೂ ಕಾನೂನು ಇಲಾಖೆಯವರ ಅನಧಿಕೃತ ಟಿಪ್ಪಣಿ ಸಂಖ್ಯೆ : ವನಇ 301 ಆಂಅಬಿ 2011 ದಿನಾಂಕ : 13-07-2011ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)

ಪಿ.ಆರ್. 1825 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಲಾ 217 ಎಲ್‌ಸಿಎಲ್ 2010, ಬೆಂಗಳೂರು ದಿನಾಂಕ : 17-06-2011**

**ವಿಷಯ :** ನ್ಯಾಯಾಲಯದಲ್ಲಿ ಸಲ್ಲಿಸುವ ವಕಾಲತ್ತು ಮತ್ತು ಮಧ್ಯಂತರ ಅರ್ಜಿಗಳಿಗೆ ವಕೀಲರ ಕಲ್ಯಾಣ ನಿಧಿ ಸ್ಟಾಂಪ್ ಹಚ್ಚುವ ಬಗ್ಗೆ ಸ್ಪಷ್ಟೀಕರಣ.

**ಉಲ್ಲೇಖ :**
1. ಪತ್ರ ಸಂಖ್ಯೆ : ಡಿಪಿಎನ್ : ಲೆಕ್ಕ-1 : 49 : 2005-06 ದಿನಾಂಕ : 12-10-2010 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ನಿರ್ದೇಶಕರಿಂದ.
2. ಸುತ್ತೋಲೆ ಸಂಖ್ಯೆ ಲಾ 163 ಎಲ್‌ಸಿಎಲ್ 2005 ದಿನಾಂಕ : 02-06-2007.

**ಪ್ರಸ್ತಾವನೆ :**

ಮೇಲ್ಕಂಡ ವಿಷಯದಲ್ಲಿ ಉಲ್ಲೇಖಿತ (2)ರ ದಿನಾಂಕ : 02-06-2007ರ ಸುತ್ತೋಲೆಯಲ್ಲಿ ಸ್ಪಷ್ಟೀಕರಣ ನೀಡಲಾಗಿತ್ತು.

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಉಲ್ಲೇಖಿತ (1)ರ ದಿನಾಂಕ : 12–10–2010ರ ಪತ್ರದಲ್ಲಿ ಕರ್ನಾಟಕ ರಾಜ್ಯದ ಅಭಿಯೋಗ ಇಲಾಖೆಯ ಅಧಿಕಾರಿಗಳು ಸೇವೆಗೆ ಸೇರುವ ಪೂರ್ವದಲ್ಲಿ ವಕೀಲರಾಗಿದ್ದಾಗ್ಯೂ ಸರ್ಕಾರಿ ಸೇವೆಗೆ ಸೇರಿದ ಬಳಿಕ ಅವರು ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿರುವ ಸನದು (Sanad) ಅಮಾನತ್ತುಗೊಳ್ಳುತ್ತದೆ. ಎಲ್ಲಿಯವರೆಗೆ ಅವರ ಸನದು ಅಮಾನತ್ತಿನಲ್ಲಿರುತ್ತದೆಯೊ ಅಲ್ಲಿಯವರೆಗೆ ಅಡ್ವೋಕೇಟ್ ವೆಲ್‌ಫೇರ್‌ಫಂಡ್ ಅಧಿನಿಯಮದ ಅಡಿಯಲ್ಲಿನ ಕ್ಷೇಮಾಭಿವೃದ್ಧಿ ನಿಧಿಗೆ ಅವರು ಸದಸ್ಯರಾಗುವುದಿಲ್ಲ, ಹಾಗೂ ಆ ನಿಧಿಯ ಯಾವುದೇ ಸೌಲಭ್ಯಕ್ಕೆ ಅರ್ಹರಾಗುವುದಿಲ್ಲ, ಆದ್ದರಿಂದ ಅಡ್ವೋಕೇಟ್ ಕಲ್ಯಾಣ ನಿಧಿ ಅಧಿನಿಯಮದ ಕಲಂ 15ರ ಅಡಿಯಲ್ಲಿ ಅವರನ್ನು ವಕೀಲರು ಎಂಬುದಾಗಿ ಪರಿಗಣಿಸಲು ಬರುವುದಿಲ್ಲ, ಹಾಗೂ ಕಲಂ 23ರ ಪ್ರಕಾರ ವೆಲ್‌ಫೇರ್‌ಫಂಡ್ ಸ್ಟಾಂಪ್‌ಗಳನ್ನು ಹಚ್ಚುವ ಬಾಧ್ಯತೆ ಅವರಿಗೆ ಇರುವುದಿಲ್ಲ.

ಆದ್ದರಿಂದ ದಿನಾಂಕ : 02–06–2007ರ ಉಲ್ಲೇಖ (4)ರ ಸುತ್ತೋಲೆ ಸೂಚನೆಗಳನ್ನು ಮಾರ್ಪಡಿಸಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಅಭಿಯೋಜಕ ಅಧಿಕಾರಿಗಳು ವೆಲ್‌ಫೇರ್ ಸ್ಟಾಂಪ್‌ಗಳನ್ನು ಅಂಟಿಸುವುದರಿಂದ ವಿನಾಯಿತಿ ನೀಡುವ ಬಗ್ಗೆ ಸುತ್ತೋಲೆಯನ್ನು ಹೊರಡಿಸಲು ಕೋರಿದ್ದು, ಸರ್ಕಾರವು ಮೇಲಿನ ಅಂಶಗಳನ್ನು ಪರಿಗಣಿಸಿ ವಕೀಲರನ್ನು ಸರ್ಕಾರಿ ಅಭಿಯೋಜಕರಾಗಿ ನೇರವಾಗಿ ನೇಮಕ ಮಾಡಿದಲ್ಲಿ ಅವರು ವಕೀಲರ ಕ್ಷೇಮಾಭಿವೃದ್ಧಿ ಕಲ್ಯಾಣನಿಧಿ ಅಧಿನಿಯಮ 1983ರ ಪ್ರಕಾರ ಕ್ಷೇಮಾಭಿವೃದ್ಧಿ ನಿಧಿ ಸ್ಟಾಂಪ್‌ಗಳನ್ನು ಅಂಟಿಸಬೇಕಾಗುತ್ತದೆ. ಆದರೆ Department of Prosecutions and Government Litigation (Recruitment) Rules, 1982ರ ಅಡಿಯಲ್ಲಿ ನೇಮಕ ಹೊಂದಿರುವ ಸರ್ಕಾರಿ ಅಭಿಯೋಜಕರಿಗೆ ಇದು ಅನ್ವಯಿಸುವುದಿಲ್ಲ ಎಂದು ಸ್ಪಷ್ಟೀಕರಿಸಿದೆ.

(ಕಾನೂನು ಕಾರ್ಯದರ್ಶಿಗಳಿಂದ ಅನುಮೋದಿಸಲ್ಪಟ್ಟಿದೆ)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಪಿ.ಆರ್. 1826 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಜಂಟಿ ಇಲಾಖಾ ವಿಚಾರಣೆ–ಶ್ರೀ ಎಂ.ವಿ. ಮುನಿರತ್ನಪ್ಪ, ನಿವೃತ್ತ ಅಪರ ನಿಯಂತ್ರಕರು ಹಾಗೂ ಶ್ರೀ ಎಸ್.ವಿ. ಸೋಮೇಶ್, ಲೆಕ್ಕಾಧೀಕ್ಷಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರುಗಳ ವಿರುದ್ಧ–ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಆಇ 212 ರಾಲೆಪ 2007 ದಿನಾಂಕ : 05–08–2010.
2. ಶ್ರೀ ನ್ಯಾ: ವಸಂತ ಹೆಚ್.ಮುಳಸಾವಳಗಿ, ನಿವೃತ್ತ ನ್ಯಾಯಾಧೀಶರು ಇವರ ವಿಚಾರಣಾ ವರದಿ ದಿನಾಂಕ : 18–03–2011.

**ಪ್ರಸ್ತಾವನೆ :**

ಶ್ರೀ ಎಂ.ವಿ. ಮುನಿರತ್ನಪ್ಪ, ಅಪರ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ನಿಯಂತ್ರಕರ ಹುದ್ದೆಯಲ್ಲಿ ಪ್ರಭಾರದಲ್ಲಿದ್ದಾಗ ಧಾರವಾಡದ ಜಿಲ್ಲಾ ಆಸ್ಪತ್ರೆ, ಹಾವೇರಿ ಸಬ್ ಡಿವಿಜನ್ ಆಸ್ಪತ್ರೆ ಹಾಗೂ ಹಳಿಯಾಳ ತಾಲ್ಲೂಕು ಆಸ್ಪತ್ರೆಗಳ ನವೀಕರಣ ವಿಸ್ತರಣೆ ಕಾಮಗಾರಿ ಸಂಬಂಧ ಸಲ್ಲಿಸಲಾದ ಬಿಲ್ಲುಗಳನ್ನು ಲೋಕೋಪಯೋಗಿ ಇಲಾಖೆ ಸಂಹಿತೆಯನ್ವಯ ಪರಿಶೀಲಿಸದೇ ಹಣ ಪಾವತಿಸಲು ಅಂದಿನ ಕಾರ್ಯಪಾಲಕ ಇಂಜಿನಿಯರ್‌ಗೆ ಶಿಫಾರಸ್ಸು ಮಾಡುವ ಮೂಲಕ ದುರ್ನಡತೆ ಎಸಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ಅಂದಿನ ಕೆ.ಎಸ್.ಎಚ್.ಡಿ.ಪಿ, ಧಾರವಾಡ ವಿಭಾಗದ ಲೆಕ್ಕಾಧೀಕ್ಷಕರಾದ ಎಂ.ನಾಗರಾಜನ್ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕೆ.ಎಸ್.ಎಚ್.ಡಿ.ಪಿ. ದೋಷಾರೋಪಣೆ ಇತ್ಯಾದಿಗಳೊಡನೆ ದಾಖಲೆಗಳನ್ನು ಕಳುಹಿಸಿದ್ದರೂ ಸಹ ವಿಚಾರಣೆ ಹೂಡಲು ಕ್ರಮ ಕೈಗೊಳ್ಳದೇ ಸಂಬಂಧಪಟ್ಟ ನೌಕರರು ದಿನಾಂಕ 30–04–2007 ರಂದು ನಿವೃತ್ತಿ ಹೊಂದುವವರೆಗೂ ಅನಗತ್ಯ ವಿಳಂಬ ಮಾಡಿ ಆನಂತರ ನಿವೃತ್ತ ಸರ್ಕಾರಿ ನೌಕರರ ವಿರುದ್ಧ ಕ್ರಮ ಕೈಗೊಳ್ಳಲು ತನಗೆ ಅಧಿಕಾರವಿಲ್ಲವೆಂದು ಸರ್ಕಾರಕ್ಕೆ ಪತ್ರ ಬರೆವ ಮೂಲಕ ತೀವ್ರ ದುರ್ನಡತೆ ಎಸಗಿದ ಆರೋಪಕ್ಕಾಗಿ ಅವರೊಡನೆ ಶ್ರೀ ಎಸ್.ವಿ. ಸೋಮೇಶ್, ಲೆಕ್ಕಾಧೀಕ್ಷಕರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ : 05–08–2010ರ ಸರ್ಕಾರಿ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ, ನ್ಯಾ : ವಸಂತ ಹೆಚ್. ಮುಳಸಾವಳಗಿ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ಮೇಲೆ (2)ರಲ್ಲಿ ಓದಲಾದ 18–03–2011ರ ವಿಚಾರಣಾ ವರದಿ ಸಲ್ಲಿಸಿ ಆರೋಪಿಗಳ ವಿರುದ್ಧ ಮಾಡಲಾದ ಆರೋಪಗಳ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

"ಶ್ರೀ ಎಂ. ನಾಗರಾಜನ್ ವಿರುದ್ಧ ಕ್ರಮ ಕೈಗೊಳ್ಳುವಂತೆ ಕೋರಿ ಕೆ.ಎಸ್.ಎಸ್.ಡಿ.ಪಿ., ಬೆಂಗಳೂರು ದಿನಾಂಕ : 05–04–2006ರಂದು ದೋಷಾರೋಪಣೆ ಇತ್ಯಾದಿಗಳೊಡನೆ ಕಳುಹಿಸಿದ ಪ್ರಸ್ತಾವನೆಯನ್ನು ಅಂದಿನ ನಿಯಂತ್ರಕರು ಪರಿಶೀಲಿಸಿ ಈ ಪ್ರಕರಣದಲ್ಲಿ ಅಂದಿನ ಎಕ್ಸಿಕ್ಯೂಟಿವ್ ಇಂಜಿನಿಯರ್ ಕೂಡ ಭಾಗಿ ಆಗಿರುವುದರಿಂದ ಪ್ರತ್ಯೇಕ ವಿಚಾರಣೆ ಬದಲು ಇಬ್ಬರ ವಿರುದ್ಧವೂ ಜಂಟಿ ಇಲಾಖಾ ವಿಚಾರಣೆ ನಡೆಸಬೇಕೆಂದು ಆದೇಶಿಸಿದ ಮೇರೆಗೆ ದಿನಾಂಕ : 25–04–2006ರ ಪತ್ರದಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಇಲಾಖೆಯ ಸಹಮತಿ ನೀಡಲಾಗಿದೆ. ಆರೋಪಿಯು ನಿಯಂತ್ರಕರ ಹುದ್ದೆಯ ಪ್ರಭಾರವಹಿಸಿಕೊಂಡ ದಿನಾಂಕ : 29–05–2006ರ ನಂತರದ ಅವಧಿಯಲ್ಲೂ ಅದೇ ವಿಷಯವನ್ನು ಮುಂದುವರೆಸಲಾಗಿದೆ. ಇದೇ ವಿಷಯ ಕುರಿತು ಲೋಕೋಪಯೋಗಿ ಇಲಾಖೆಯೊಡನೆ ಪತ್ರ ವ್ಯವಹಾರ ನಡೆಯುತ್ತಾ ಬಂದಿದೆ. ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ದಿನಾಂಕ : 17–04–2007ರ ಪತ್ರವು ಸ್ವೀಕೃತಗೊಂಡ ನಂತರ ತನ್ನ ಅಧೀನ ಸಿಬ್ಬಂದಿಯೊಡನೆ ಆರೋಪಿಯು ಚರ್ಚಿಸಿದ ಪರಿಣಾಮವಾಗಿ ವಾಸ್ತವಾಂಶ ತಿಳಿದು ಬಂದು ಆರೋಪಿಯು ಬರೆದ ಪತ್ರದ ಮೇರೆಗೆ ಶ್ರೀ ಎಂ. ನಾಗರಾಜನ್ ವಿರುದ್ಧ ಸಿವಿಲ್ ಮೊಕದ್ದಮೆ ದಾಖಲಿಸಲು ಕೆ.ಎಚ್.ಎಸ್.ಡಿ.ಪಿ.ಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಕೆ.ಎಸ್.ಎಚ್.ಡಿ.ಪಿ. ಕಳುಹಿಸಿದ ಪ್ರಸ್ತಾವನೆಯಂತೆ ಶ್ರೀ ಎಂ. ನಾಗರಾಜನ್, ಲೆಕ್ಕಾಧೀಕ್ಷಕರ ವಿರುದ್ಧ ವಿಚಾರಣೆ ಹೂಡದೇ ಜಂಟಿ ವಿಚಾರಣೆ ಹೂಡಲು ಸಹಮತಿ ನೀಡುವ ನಿರ್ಣಯವನ್ನು ಆರೋಪಿಯ ಪೂರ್ವಾಧಿಕಾರಿಯು ತೆಗೆದುಕೊಂಡ ಕಾರಣ ಶ್ರಿ ಎಂ.ವಿ. ಮುನಿರತ್ನಪ್ಪ, ಅಪರ ನಿಯಂತ್ರಕರು ಹಾಗೂ ಶ್ರಿ ಎಸ್.ವಿ. ಸೋಮೇಶ್, ಲೆಕ್ಕಾಧೀಕ್ಷಕರು, ರಾಲೆಪ ಇಲಾಖೆ ಅವರುಗಳ ವಿರುದ್ಧ ಹೊರಿಸಲಾದ ಆರೋಪ ಸಾಬೀತಾಗಿರುವುದಿಲ್ಲ."

ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 212 ರಾಲೆಪ 2007, ಬೆಂಗಳೂರು ದಿನಾಂಕ : 14ನೇ ಜುಲೈ 2011.**

ಸರ್ಕಾರವು ಶ್ರೀ ಎಂ.ವಿ. ಮುನಿರತ್ನಪ್ಪ, ನಿವೃತ್ತ ಅಪರ ನಿಯಂತ್ರಕರು ಹಾಗೂ ಶ್ರೀ ಎಸ್.ವಿ.ಸೋಮೇಶ್, ಲೆಕ್ಕಾಧೀಕ್ಷಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರುಗಳನ್ನು ದಿನಾಂಕ : 05–08–2010ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1827 ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## PERSONNEL AND ADMINISTRATIVE REFORMS SECRETARIAT

**Sub:** Declaration of equivalence of the posts under Rule 11 of IFS (Pay) Rules, 2007.

**Read:** Government Notification No. DPAR/39/SFP/2011 dated : 04-07-2011.

**G.O. No. DPAR 39 SFP 2011, Bangalore, Dated : 04-07-2011.**

Government declare under rule 11 of IFS (Pay) Rules, 2007, that the following posts are equivalent in status and responsibilities to the IFS cadre posts shown against them.

| Sl.No. | Posts | Equivalent |
|---|---|---|
| 1. | APCCF & MD, Karnataka State Handicrafts Development Corporation, Bangalore. | APCCF (Development) as included in Schedule II-A to the said rules. |
| 2. | APCCF & /Executive Director, Mahatma Gandhi Institute of Rural Energy & Development, Bangalore. | APCCF (Development) as included in Schedule II-A to the said rules. |
| 3. | CCF & MD, Karnataka Rural Infrastructure Development Bangalore. | CCF (Headquarters) as included in Schedule II-A to the said rules. |
| 4. | CCF, Watershed Development Department, Bangalore. | CCF (Headquarters) as included in Schedule II-A to the said rules. |
| 5. | DCF & Director, Electronic Delivery of Citizen Services (EDCS), DPAR (e-Governance), Bangalore. | DCF (Headquarters) as included in Schedule II-B to the said rules. |

By Order and in the name of the Governor of Karnataka

**A.P.ATRE**

PR No. 1828 Under Secretary to Government,

DPAR (Services-4)

## COMMERCE AND INDUSTRIES SECRETARIAT

**Sub:** Reimbursement Corporation Surrender of amount under Head of Account "6852-02 800-0-02-394 (Plan) 2010-11" reg.

**Read:**
1. Govt. Order No : FD 283 CSL 2009, dated : 08-12-2009.
2. Govt. Order No : CI 430 SPI 2010, dated : 20-09-2010.
3. Govt. Order No : FD 176 BRS 2010, dated : 18-12-2010.
4. Govt. Order No : CI 430 SPI 2010, dated : 21-02-2011.
5. Govt. Order No : CI 430 SPI 2010, dated : 31-03-2011.

**PREAMBLE :**

In the G.O. No. CI 430 SPI 2010, dated : 20-09-2010 Rs. 50 crores and in G.O. dated 21-02-2011, Rs. 10.31 crores has been released towards the reimbursement of Central Sales Tax paid on inter-state sale of metro coaches by M/s BEML Ltd., to Delhi Metro Rail Corporation from the loan head of account "6852-02-800-0-02-394 (Plan)" during 2010-11.

In the Supplementary Estimates 2010-11, Rs. 60.31 crores has been provided for reimbursement of CST to BEML. The expenditure which was booked under the Loan Account Head was classified as revenue expenditure by way of adjustment under G.O. No. (5) above. Since this amount is provided under Revenue Head of Account "2852-80-800-0-43-059- Other Expenses (Plan) 2010-11", the amount of Rs. 60.31 crores provided under "6852-02-800-0-02" (Plan) 2010-11 has to be surrendered.

Hence this order.

**Government Order No. CI 430 SPI 2010, Bangalore, Dated : 30-03-2011.**

For the reasons explained in the preamble, the amount Rs. 60.31 crores (Rupees Sixty Crores Thirty one Lakhs only) provided under Head of Account "6852-02-800-0-02-394 (Plan) 2010-11 is surrendered.

By Order and in the name of the Governor of Karnataka

**A.V. SRINIVASA DIKSHIT**

Desk Officer (Technical Cell)

Commerce and Industries Department.

## ANNEXURE

(Rs. in Crores)

| Sl. No. | Head of Account | Balance Account | Remarks |
|---|---|---|---|
| 01. | "6852-02-800-0-02-394 (Plan) 2010-11" | Rs. 60.31 | Rs. 50.00 Crores Released vide G.O. No : CI 430 SPI 2010, dated : 20-09-2010. Rs. 10.31 crores Released vide G.O. No : CI 430 SPI 2010, dated : 21-02-2011. |
| 02. | "2852-80-800-0-43-059- Other Expenses (Plan) 2010-11" | | Supplementary Estimates 2010-11 Rs. 60.31 crores has been provided for reimbursement of CST to BEML. |
| 03. | "6852-02-800-0-02-394 (Plan) 2010-11" | | Rs. 60.31 crores provided is surrendered. |

.

A.V. SRINIVASA DIKSHIT
Desk Officer (Technical Cell)
Commerce and Industries Department.

PR 1829

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ : ಸಿಐ 123 ಎಸ್‌ಪಿಐ 2011, ಬೆಂಗಳೂರು ದಿನಾಂಕ : 30–06–2011**

**ವಿಷಯ :** ಕರ್ನಾಟಕ ಉದ್ಯೋಗ ಮಿತ್ರ ವತಿಯಿಂದ ಏರೋ ಶೋ, ವಿಶ್ವ ಕನ್ನಡ ಸಮ್ಮೇಳನ ಮತ್ತು ಗುಲ್ಬರ್ಗಾ ಹೂಡಿಕೆದಾರರ ಸಮಾವೇಶ ಕಾರ್ಯಕ್ರಮಗಳ ಆಯೋಜನೆಗೆ ಬೇಕಾದ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ : ಎಇಪಿ : ಎ1 : ಕಉಮಿ : ಅ.ಬಿ. 02 : 2011–12 ದಿನಾಂಕ : 21–04–2011 ಮತ್ತು 27–05–2011.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಸರ್ಕಾರಿ ಆದೇಶ ಸಂಖ್ಯೆ : ಸಿಐ 123 ಎಸ್‌ಪಿಐ 2011, ದಿನಾಂಕ : 17–06–2011 ರ ಆದೇಶದ ಭಾಗದಲ್ಲಿನ ಕಂಡಿಕೆ 2 ರಲ್ಲಿ ಲೆಕ್ಕ ಶೀರ್ಷಿಕೆ **"2852–8–800–0–46–125 ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ" (ಯೋಜನೇತರ) 2011–12 ರಡಿ ಭರಿಸತಕ್ಕದ್ದು** ಎಂಬುದರ ಬದಲಾಗಿ **ಲೆಕ್ಕ ಶೀರ್ಷಿಕೆ "2852–80–800–0–46–125 ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ" (ಯೋಜನೆ) 2011–12 ರಡಿ ಭರಿಸತಕ್ಕದ್ದು" ಎಂದು ಓದಿಕೊಳ್ಳತಕ್ಕದ್ದು.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1830

## ಆರ್ಥಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಕಡ್ಡಾಯ ಜೀವವಿಮಾ ಯೋಜನೆಯಡಿ ದಿನಾಂಕ: 01–04–2006 ರಿಂದ 31–03–2008ಕ್ಕೆ ಅಂತ್ಯಗೊಂಡ ದ್ವೈವಾರ್ಷಿಕ ಅವಧಿಗೆ ಮೌಲ್ಯಮಾಪನ ವರದಿಯ ಆಧಾರದ ಮೇಲೆ ಜೀವ ವಿಮಾ ಪಾಲಿಸಿಗಳ ಸ್ಥಿರಪಡಿಸಿದ ಮೊತ್ತದ ಮೇಲೆ ಬೋನಸ್ ನೀಡಲು ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಆಇ 46 ಕವಿಇ 2010, ದಿನಾಂಕ: 31–01–2011.
2. ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೆಜಿಐಡಿ/ಎವಿಜಿ/ವಿ.ಮೌ.ಮಾ/55/2010–11, ದಿನಾಂಕ: 25–04–2011.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯಲ್ಲಿ 2006–2008ರ ದ್ವೈವಾರ್ಷಿಕ ಅವಧಿಯಲ್ಲಿ ಚಾಲ್ತಿಯಲ್ಲಿರುವ ವಿಮಾ ಪಾಲಿಸಿಗಳ ಮೌಲ್ಯಮಾಪನ ಕಾರ್ಯವನ್ನು ಕೆ.ವಿ.ವೈ.ಶಾಸ್ತ್ರಿ, ಕನ್‌ಸಲ್ಟಿಂಗ್ ಆಕ್ಚುಯರಿ, ಹೈದರಾಬಾದ್ ಅವರಿಗೆ ವಹಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ: 31–01–2011 ರ ಸರ್ಕಾರಿ ಪತ್ರದಲ್ಲಿ ಅನುಮತಿ ನೀಡಲಾಯಿತು. ಅದರಂತೆ ಕ್ರಮಕೈಗೊಂಡ ನಿರ್ದೇಶಕರು ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 25–04–2011 ರ ತಮ್ಮ ಪತ್ರದಲ್ಲಿ 2006–08ನೇ ದ್ವೈವಾರ್ಷಿಕ ಅವಧಿಯ ಕಡ್ಡಾಯ ಜೀವ ವಿಮಾ ಪಾಲಿಸಿಗಳ ಮೌಲ್ಯ ಮಾಪನ ಮಾಡಿದ ವಿಮಾ ಗಣಕರ ವರದಿಯನ್ನು ಕಳುಹಿಸಿ, ಅದನ್ನು ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ. ಮೌಲ್ಯಮಾಪನ ವರದಿಯ ಪ್ರಮುಖ ಅಂಶಗಳು ಕೆಳಕಂಡಂತಿದೆ.

1. **ವಿಮಾ ವ್ಯವಹಾರದ ಮಾಹಿತಿ:**

| ವಿವರಗಳು | ಮಾಪನ | ಅವಧಿ | |
|---|---|---|---|
| | | 2004–06 | 2006–08 |
| ಎ) ಚಾಲ್ತಿಯಲ್ಲಿರುವ ಪಾಲಿಸಿಗಳು | ಸಂಖ್ಯೆಗಳಲ್ಲಿ | 10,27,292 | 11,07,479 |
| ಬಿ) ವಿಮಾ ಮೊಬಲಗು | ಕೋಟಿ ರೂ.ಗಳಲ್ಲಿ | 4,658.29 | 6,428.16 |
| ಸಿ) ಅಧಿಲಾಭಾಂಶ | ಕೋಟಿ ರೂ.ಗಳಲ್ಲಿ | 2,528.76 | 2,981.28 |
| ಡಿ) ವಾರ್ಷಿಕ ವಿಮಾ ಕಂತು ಆದಾಯ | ಕೋಟಿ ರೂ.ಗಳಲ್ಲಿ | 223.66 | 326.02 |
| ಇ) ವಿಮಾ ನಿಧಿಯ ಶಿಲ್ಕು | ಕೋಟಿ ರೂ.ಗಳಲ್ಲಿ | 3,114.40 | 3,742.90 |

2. 2006–08 ವರ್ಷಗಳಲ್ಲಿ ವಿಮಾ ಗಣನೆಯ ನಂತರ ಹೆಚ್ಚುವರಿ ಮೊತ್ತ (ಟೋಟಲ್ ಸರ್‌ಪ್ಲಸ್) ರೂ. 642.77 ಕೋಟಿಗಳಾಗಿದ್ದು, ಈ ಮೊತ್ತವು 2004–06ರ ಮೌಲ್ಯಮಾಪನ ವರದಿಯ ಅಂತ್ಯಕ್ಕೆ ರೂ. 123.95 ಕೋಟಿಯಷ್ಟಿತ್ತು.

3. ವಿಮಾ ಕಂತಿನ ಆದಾಯಕ್ಕನುಗುಣವಾಗಿ 2006–2008ರ ಮೌಲ್ಯಮಾಪನ ಅವಧಿಗೆ ಸರಾಸರಿ ವೆಚ್ಚದ ಅನುಪಾತ ಶೇ. 4.80 ಆಗಿದ್ದು, ಈ ವೆಚ್ಚವು 2004–06 ರ ಅಂತ್ಯಕ್ಕೆ ಶೇ. 4.78 ಆಗಿದ್ದಿತು.

4. ವಿಮಾ ನಿಧಿಯು 2006–07 ರಲ್ಲಿ ಶೇ. 8.80 ಹಾಗೂ 2007–08ನೇ ಸಾಲಿನಲ್ಲಿ ಶೇ. 8.92 ಬಡ್ಡಿಯನ್ನು ಗಳಿಸಿದ್ದು, ಈ ದರವು 2004–05 ರಲ್ಲಿ ಶೇ. 8.91 ಹಾಗೂ 2005–2006 ರಲ್ಲಿ ಶೇ. 8.43 ದರದಲ್ಲಿತ್ತು.

5. ವಿಮಾ ಗಣನಾ ಕಾರ್ಯಕ್ಕೆ ಅಳವಡಿಸಿಕೊಂಡ ಮಾರ್ಟಾಲಿಟಿ ಕೋಷ್ಟಕದಂತೆ ವಾಸ್ತವ ಮರಣಗಳ ಹಾಗೂ ನಿರೀಕ್ಷೆಯ ಮರಣಗಳ ಮೇಲಿನ ಅನುಪಾತ 2006–2008 ಕ್ಕೆ ಶೇ. 76.04 ಇದ್ದು, ಈ ಅನುಪಾತವು 2004–2006ರ ಅವಧಿಗೆ ಶೇ. 75.59 ಆಗಿದ್ದುದು ಕಂಡುಬಂದಿದೆ.

ಮುಂದುವರೆದು, ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರು ಮೇಲಿನ ಅಂಶಗಳ ಆಧಾರದ ಮೇಲೆ 2006–2008ರ ದ್ವೈವಾರ್ಷಿಕ ಅವಧಿಯಲ್ಲಿ ಚಾಲ್ತಿಯಲ್ಲಿರುವ ಎಲ್ಲಾ ಪಾಲಿಸಿಗಳಿಗೆ ಪ್ರತಿ 1000/– ರೂ.ಗಳಿಗೆ ಪ್ರತಿ ವರ್ಷಕ್ಕೆ ರೂ. 85/– ಅಧಿಲಾಭಾಂಶವನ್ನು ಹಾಗೂ 01–04–2008 ರಿಂದ 31–03–2010ರ ಅವಧಿಯಲ್ಲಿ ಫಲಪ್ರದ, ಮರಣಜನ್ಯ ಹಾಗೂ ವಿಮಾ ತ್ಯಾಗ ಮೌಲ್ಯಗಳಿಂದ ಹೊರಹೋಗಿರುವ ಪಾಲಿಸಿಗಳಿಗೆ ಪ್ರತಿ 1000/– ರೂ.ಗಳಿಗೆ ವಾರ್ಷಿಕ ರೂ. 85/– ಮಧ್ಯಂತರ ಲಾಭಾಂಶವನ್ನು ನೀಡಲು ವಿಮಾ ಗಣಕರು ಶಿಫಾರಸ್ಸು ಮಾಡಿರುತ್ತಾರೆಂದು ತಿಳಿಸಿದ್ದಾರೆ.

ಮುಂದುವರೆದು, ಮೇಲ್ಕಂಡ ವಿಮಾ ಗಣಕರ ಶಿಫಾರಸ್ಸಿನಂತೆ ಈ ಕೆಳಕಂಡ ಪ್ರಸ್ತಾವನೆಗಳಿಗೆ ಸರ್ಕಾರದ ಆದೇಶವನ್ನು ನೀಡಬೇಕೆಂದು ನಿರ್ದೇಶಕರು ಕೋರಿದ್ದಾರೆ.

1. ದಿನಾಂಕ: 01–04–2006 ರಿಂದ 31–03–2008ರ ದ್ವೈವಾರ್ಷಿಕ ಮೌಲ್ಯಮಾಪನ ಅವಧಿಯಲ್ಲಿ ಚಾಲ್ತಿಯಲ್ಲಿದ್ದ ಎಲ್ಲಾ ಪಾಲಿಸಿಗಳಿಗೆ ಹಾಗೂ ಚಾಲ್ತಿಯಲ್ಲಿದ್ದ ಪ್ರತಿ ತಿಂಗಳ ಅವಧಿಯನ್ನು ಒಳಗೊಂಡಂತೆ ಪಾಲಿಸಿಗಳ ಸ್ಥಿರಪಡಿಸಿದ ವಿಮಾ ಮೊತ್ತದ ಮೇಲೆ ಪ್ರತಿ ಸಾವಿರ ರೂ.ಗಳಿಗೆ ಪ್ರತಿ ವರ್ಷಕ್ಕೆ ರೂ.85/– ರಂತೆ ಸರಳ ಪ್ರತ್ಯಾವರ್ತಿ ಲಾಭಾಂಶ (ಸಿಂಪಲ್ ರಿವರ್ಷನರಿ ಬೋನಸ್) ಘೋಷಿಸುವುದು.
2. ಅವಧಿಪೂರ್ಣ, ಮರಣಜನ್ಯ ಹಾಗೂ ವಿಮಾ ತ್ಯಾಗ ಮೌಲ್ಯಗಳಿಂದ ದಿನಾಂಕ: 01–04–2008 ರಿಂದ 31–03–2010ರ ಅವಧಿಯಲ್ಲಿ ಹೊರ ಹೋಗಿರುವ ವಿಮಾ ಪಾಲಿಸಿಗಳಿಗೆ ಪ್ರತಿ ಸಾವಿರ ರೂ. ವಿಮಾ ಮೊತ್ತಕ್ಕೆ ಪ್ರತಿ ವರ್ಷಕ್ಕೆ ರೂ. 85/– ರಂತೆ ಮಧ್ಯಂತರ ಲಾಭಾಂಶವನ್ನು (ಇಂಟೀರಿಯಮ್ ಬೋನಸ್) ಘೋಷಿಸುವುದು.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 46 ಕವಿಇ 2010, ಬೆಂಗಳೂರು, ದಿನಾಂಕ: 21–07–2011**

2006–2008ರ ದ್ವೈವಾರ್ಷಿಕ ಅವಧಿಯ ವಿಮಾ ಗಣನಾ ವರದಿ ಹಾಗೂ ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರ ಶಿಫಾರಸ್ಸನ್ನು ವಿವರವಾಗಿ ಪರಿಶೀಲಿಸಿ ಕೆಳಕಂಡ ಅಂಶಗಳಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

i) ದಿನಾಂಕ: 31–03–2008 ರಂದು ಚಾಲ್ತಿಯಲ್ಲಿದ್ದ ಎಲ್ಲಾ ಪಾಲಿಸಿಗಳಿಗೆ 2006–2008ರ ದ್ವೈವಾರ್ಷಿಕ ಅವಧಿಯಲ್ಲಿ ವಿಮಾ ಮೊತ್ತದ ಪ್ರತಿ 1,000/– ರೂ. ಗಳಿಗೆ ವಾರ್ಷಿಕ 85/– ರೂ. ಬೋನಸ್ಸನ್ನು ನೀಡುವುದು.

ii) ದಿನಾಂಕ: 01–04–2008 ರಿಂದ 31–03–2010ರ ಅವಧಿಯಲ್ಲಿ ಅವಧಿ ಪೂರ್ಣತೆ, ಮರಣ ಜನ್ಯ ಹಾಗೂ ವಿಮಾ ತ್ಯಾಗ ಮೌಲ್ಯಗಳಿಂದ ಹೊರಹೋಗಿರುವ ವಿಮಾ ಪಾಲಿಸಿಗಳಿಗೆ ಮುಂದಿನ ಮೌಲ್ಯಮಾಪನ ದಿನಾಂಕದವರೆಗೆ ಪ್ರತಿ 1,000/– ರೂ.ಗಳಿಗೆ ವಾರ್ಷಿಕ 85/– ರೂ. ಮಧ್ಯಂತರ ಬೋನಸ್ಸನ್ನು ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

ಪಿಆರ್.ನಂ. 1831

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದರ ವಿಶೇಷಾಧಿಕಾರಿಯವರ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :** 1. ಸಹಕಾರ ಸಂಘಗಳ ನಿಬಂಧಕರ ಆದೇಶ ಸಂಖ್ಯೆ: ಯುಬಿಸಿ-1/352/ಎಸ್.ಎಸ್.ಎನ್/2009-2010, ದಿನಾಂಕ: 08-01-2010, 07-07-2010 ಮತ್ತು 08-01-2011.

2. ಸಹಕಾರ ಸಂಘಗಳ ನಿಬಂಧಕರ ಸಮಸಂಖ್ಯೆ: ದಿನಾಂಕ: 26-05-2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದ ಮೇರೆಗೆ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರು ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದರ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ: 07-07-2011ರ ವರೆಗೆ ವಿಸ್ತರಿಸಿ ಆದೇಶಿಸಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ರಿಟ್ ಅರ್ಜಿ ಸಂಖ್ಯೆ: 1526/2010ರಲ್ಲಿ ಬಾಕಿ ಇರುವ ಪ್ರಕರಣವನ್ನು ವಿಚಾರಣೆ ನಡೆಸಿ ಇತ್ಯರ್ಥಗೊಳಿಸಲು ಆದೇಶವಾಗಿರುತ್ತದೆ ಎಂದೂ, ಅಲ್ಲದೆ ಬ್ಯಾಂಕಿನ ಸದಸ್ಯರುಗಳಾದ ಶ್ರೀ ನಾರಾಯಣ್ ಕೆ ಖಾನಾಪುರಿ ಮತ್ತು ಇತರರು ಗೌರವ ಉಚ್ಚನ್ಯಾಯಾಲಯ ಸಂಚಾರಿ ಪೀಠ, ಧಾರವಾಡ ಇಲ್ಲಿ ರಿಟ್ ಅರ್ಜಿ ಸಂಖ್ಯೆ: 60847-50/2011 ಮತ್ತು ಶ್ರೀ ನಾಗರಾಜ್ ಹೆಚ್.ಹೆಚ್. ಹಾಗೂ ಇನ್ನೊಬ್ಬರು ಗೌರವ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ರಿಟ್ ಅರ್ಜಿ ಸಂಖ್ಯೆ: 12977-78/2011ರಲ್ಲಿ ವಿಶೇಷಾಧಿಕಾರಿಗಳ ದಿನಾಂಕ: 17-01-2011ರ ನಡವಳಿಗಳನ್ನು ಪ್ರಶ್ನಿಸಿದ್ದು, ಅವುಗಳು ಇತ್ಯರ್ಥಕ್ಕೆ ಬಾಕಿ ಇರುತ್ತದೆ. ಸಹಕಾರ ಸಂಘಗಳ ನಿಬಂಧಕರ ಆದೇಶದ ದಿನಾಂಕ: 06-01-2011ರ ಪ್ರಕಾರ ವಿಚಾರಣಾಧಿಕಾರಿಗಳ ಅವಧಿಯು 07-07-2011ಕ್ಕೆ ಅಂತ್ಯಗೊಳ್ಳುತ್ತದೆ. ಮೇಲ್ಕಂಡ ಕಾರಣಗಳಿಂದ ವಿಶೇಷಾಧಿಕಾರಿಗಳ ಅವಧಿಯನ್ನು ದಿನಾಂಕ: 08-07-2011 ರಿಂದ ಒಂದು ವರ್ಷದವರೆಗೆ ವಿಸ್ತರಿಸಲು ದಿನಾಂಕ: 10-05-2011ರ ವಿಶೇಷಾಧಿಕಾರಿಗಳ ಸಭೆಯಲ್ಲಿ ನಿರ್ಣಯಿಸಿರುತ್ತಾರೆ ಹಾಗೂ ಗೌರವ ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯಗಳಲ್ಲಿ ಚುನಾವಣೆ ಪೂರ್ವದಲ್ಲಿ ಸದಸ್ಯತ್ವ ನೀಡುವ ಬಗ್ಗೆ ಸಂಬಂಧಿಸಿದಂತೆ ಪ್ರಕರಣಗಳು ವಿಚಾರಣೆಗೆ ಬಾಕಿ ಇರುವುದರಿಂದ ಚುನಾವಣೆ ನಡೆಸಲು ಸಾಧ್ಯವಾಗುತ್ತಿಲ್ಲವೆಂದು ಸಹಕಾರ ಸಂಘಗಳ ನಿಬಂಧಕರು ತಿಳಿಸಿರುತ್ತಾರೆ.

ಸರ್ಕಾರವು ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 128 ಸಿಎಲ್ಎಂ 2011, ದಿನಾಂಕ: 12-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 31(1) ಅನ್ನು ಸಡಿಲಿಸಿ ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದರ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ: 08-07-2011 ರಿಂದ ಒಂದು ವರ್ಷದ ಅವಧಿಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 08-07-2011 ರಿಂದ ಒಂದು ವರ್ಷದ ಅವಧಿಯವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿಆರ್.ನಂ. 1832

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ವಸರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿ ಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 02-06-2011 ರ ಪತ್ರ ಸಂಖ್ಯೆ: ಮುಇಂ/ಸನೀ(ಉ)/ಭೂಸ್ವಾಪ್ರ/2011-12/2984.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ವಸರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಳಗಾನೂರ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 02-06-2011ರ ಪತ್ರದಲ್ಲಿ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ.:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 30-01-1997.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 04-12-1999.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಲ್ಲಿ ಪ್ರತಿ ಎಕರೆಗೆ ರೂ. 16,000/-ಗಳನ್ನು ನಿಗದಿಪಡಿಸಿರುತ್ತಾರೆ. ಅದರಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಮುದ್ದೇಬಿಹಾಳ ಸಿವಿಲ್ ನ್ಯಾಯಾಲಯದಲ್ಲಿ (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ:

93/01ನ್ನು ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆಗೆ ರೂ. 1,09,800/-ಗಳನ್ನು ನಿಗದಿಪಡಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸುವಂತೆ ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 980 ಎಲ್‌ಸಿಬಿ 2009, ದಿನಾಂಕ: 07-05-2009 ರಂದು ಅಭಿಪ್ರಾಯ ನೀಡಿದೆ.

| ಕ್ರ.ಸಂ. | ಎಲ್.ಎ.ಸಿ. | ಬಳಗಾನೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 93/2001 | 278/01 | 2-26 | 9,94,432-00 |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 61 ಭೂಸ್ವಾಪ್ರ 2011 ಬೆಂಗಳೂರು, ದಿನಾಂಕ: 21ನೇ ಜುಲೈ 2011**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ವಸರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಳಗಾನೂರ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 9,94,432-00ಗಳನ್ನು (ಒಂಭತ್ತು ಲಕ್ಷದ ತೊಂಭತ್ತನಾಲ್ಕು ಸಾವಿರದ ನಾನೂರ ಮೂವತ್ತೆರಡು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011-12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 9,94,432/-ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20-10-2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿಆರ್.ನಂ. 1833 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿ ಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 01-07-2010 ರ ಪತ್ರ ಸಂಖ್ಯೆ: ಮುಇಂ/ಸನೀ(ಉ)/ಭೂಸ್ವಾಪ್ರ/2010-11/3785.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು ದಾಸನಹಳ್ಳಿ, ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪೋತಲಕಟ್ಟೆ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ: 01-07-2010ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ.:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 16-09-1982.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 16-04-1986.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಮೂಲ ಐತೀರ್ಪಿನಂತೆ ಪರಿಹಾರ ಧನ ಪಡೆದು ಇನ್ನೂ ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೊಸಪೇಟೆಯ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆಗೆ ರೂ. 15,000/-ಗಳಂತೆ ನಿಗದಿಪಡಿಸಿ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಲಾ 2439 ಎಲ್.ಎಸ್.ಪಿ 2005, ದಿನಾಂಕ: 06-02-2006 ಮತ್ತು ಕಂದಾಯ ಇಲಾಖೆಯ ಪತ್ರ ಸಂಖ್ಯೆ: ಆರ್‌ಡಿ 202 ಎಲ್‌ಸಿಜಿ 2008, ದಿನಾಂಕ: 12-06-2009ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಪೋತಲಕಟ್ಟಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 2/04 | 122, 122/P/2 | 1–69 | 100279 |
| 2 | 3/04 | 99, 107 | 2–42 | 177806 |
| 3 | 4/04 | 29/2, 112 | 1–78 | 130784 |
| 4 | 5/04 | 117/ P | 2–39 | 178272 |
| 5 | 6/04 | 76 | 1–83 | 136501 |
| 6 | 7/04 | 119, 120 | 2–84 | 199433 |
| 7 | 8/04 | 101, 108 | 1–71 | 97733 |
| 8 | 9/04 | 100, 109 | 1–69 | 126058 |
| 9 | 10/04 | 105 | 0–57 | 33372 |
| 10 | 11/04 | 69, 70 | 3–97 | 296126 |
| 11 | 14/04 | 28/2 | 3–10 | 259674 |
| 12 | 15/04 | 94 | 12–01 | 1005432 |
| | ಒಟ್ಟು | | | **2741470** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 104 ಭೂಸ್ವಾಪ್ರ 2010 ಬೆಂಗಳೂರು, ದಿನಾಂಕ: 18ನೇ ಜುಲೈ 2011**

ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು ದಾಸನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಪೋತಲಕಟ್ಟಿ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 27,41,470–00ಗಳನ್ನು (ಇಪ್ಪತ್ತೇಳು ಲಕ್ಷದ ನಲವತ್ತೊಂದು ಸಾವಿರದ ನಾನೂರ ಎಪ್ಪತ್ತು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 27,41,470/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿಆರ್.ನಂ. 1834 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಮುರುಗಣ್ಣನ ಕೆರೆ, ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 125 ಭೂಸ್ವಾಪ್ರ 2010, ದಿನಾಂಕ: 24–03–2011.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ–1/3/ಭೂಸ್ವಾಧೀನ ಅನುದಾನ/11–12/1189, ದಿನಾಂಕ: 07–07–11.
3. ಸರ್ಕಾರದ ಆದೇಶ ಸಂಖ್ಯೆ: ಸನೀಇ 89 ಭೂಸ್ವಾಪ್ರ 2008 ದಿನಾಂಕ: 25–02–2009.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾ: ಮುರುಗಣ್ಣನಕೆರೆ ಏರಿ, ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಪರಿಹಾರ ಪಾವತಿಸಲು ರೂ. 5,85,733/–ಗಳಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ಸಂಖ್ಯೆ: ಸನೀಇ 125 ಭೂಸ್ವಾಪ್ರ 2010, ದಿನಾಂಕ: 24–03–2011 ರಂದು ಆದೇಶ ಹೊರಡಿಸಲಾಗಿದೆ. 2010–11ರ ಆರ್ಥಿಕ ವರ್ಷದ ಅಂತ್ಯದಲ್ಲಿ ಖಜಾನೆಯಲ್ಲಿ ಸದರಿ ಮೊತ್ತವನ್ನು

ಬಳಸಿಕೊಳ್ಳಲು ಸಾಧ್ಯವಾಗಲಿಲ್ಲವೆಂದು ಹಾಗೂ ಈ ಅನುದಾನವನ್ನು ಸರ್ಕಾರಕ್ಕೆ ಅಧ್ಯರ್ಪಿಸಲಾಗಿರುವ ಕಾರಣ, ದಿನಾಂಕ: 24-03-2011ರ ಆದೇಶವನ್ನು ಹಿಂಪಡೆಯ ಬೇಕಾಗುತ್ತದೆ.

ಮುಂದುವರೆದಂತೆ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಮುರುಗಣ್ಣನ ಕೆರೆ, ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲುಗಿನಕಟ್ಟೆ ಮತ್ತು ಹೊಸೂರು ಗ್ರಾಮಗಳ ಸ.ನಂ.ಗಳಿಗೆ ಸೇರಿದ ಜಮೀನುಗಳಿಗೆ ಸೊರಬ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಪಾವತಿಸಲು ಮೇಲೆ (3)ರಲ್ಲಿ ಓದಲಾದ 25-02-2009ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಿದೆ. ಈ ಆದೇಶದಲ್ಲಿ ಸೇರಿದ್ದ ಎಲ್.ಎ.ಸಿ. ಸಂಖ್ಯೆ: 51/07ರಲ್ಲಿ ಹೊಸೂರು ಗ್ರಾಮದ ಸ.ನಂ. 96ರ 0-16 ಎಕರೆಗೆ ರೂ. 88,355-00ಗಳ ಪರಿಹಾರ ಧನ ಪಾವತಿಸಲು ಅನುಮೋದನೆ ನೀಡಲಾಗಿತ್ತು. ಈ ಎಲ್.ಎ.ಸಿ. ಪ್ರಕರಣದಲ್ಲಿ ಹೊಸೂರು ಗ್ರಾಮದ ಸ.ನಂ. 96ರ 0-16 ಎಕರೆ ಅಲ್ಲದೆ ಇದೇ ಗ್ರಾಮದ ಸ.ನಂ. 106/1ರ 3-24 ಎಕರೆಗೆ ಸಹ ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ಆದೇಶಿಸಿತ್ತು. ಕೈಬಿಟ್ಟು ಹೋಗಿರುವ ಸ.ನಂ. 106/1ರ 3-24 ಎಕರೆ ಜಮೀನಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹಣ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 07-07-2011ರ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಕೋರಿದ್ದಾರೆ.

ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಹೊಸೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 51/07 | 106/1 | 3.24 | 5,85,733-00 |
| | **ಒಟ್ಟು** | | | **5,85,733-00** |

ಸಿವಿಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ: ಆರ್‌ಡಿ 530 ಎಲ್‌ಎಸಿ 2008, ದಿನಾಂಕ: 27-12-2008ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 73 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 21ನೇ ಜುಲೈ 2011**

ಸದರಿ ಪ್ರಕರಣದಲ್ಲಿ ದಿನಾಂಕ: 24-03-2011 ರಂದು ಹೊರಡಿಸಲಾದ ಸರ್ಕಾರದ ಆದೇಶವನ್ನು ಹಿಂಪಡೆಯಲಾಗಿದೆ. ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಮುರುಗಣ್ಣನ ಕೆರೆ, ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲುಗಿನಕಟ್ಟೆ ಮತ್ತು ಹೊಸೂರು ಗ್ರಾಮಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ: 51/07ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ. 5,85,733-00ಗಳನ್ನು (ಐದು ಲಕ್ಷದ ಎಂಭತ್ತೈದು ಸಾವಿರದ ಏಳುನೂರ ಮೂವತ್ತಮೂರು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011-12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು- ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 5,85,733/-ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20-10-2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 1835

## ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ :** ಕವಿ ಚಕ್ರವರ್ತಿ ರನ್ನ ಪ್ರತಿಷ್ಠಾನಕ್ಕೆ ಸದಸ್ಯರನ್ನು ನೇಮಿಸುವ ಬಗ್ಗೆ

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 910 ಕಸಧ 2010. ದಿನಾಂಕ:22-11-2010.

2. ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 368 ಕಸಧ 2011. ದಿನಾಂಕ: 26-04-2011

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಇವರ ಅಧ್ಯಕ್ಷತೆಯಲ್ಲಿ ಕವಿ ಚಕ್ರವರ್ತಿ ರನ್ನ ಪ್ರತಿಷ್ಠಾನ ರಚಿಸಲಾಗಿದೆ. ಓದಲಾದ (2)ರ ಆದೇಶದಲ್ಲಿ ಶ್ರೀ ರುದ್ರಮುನಿ ಶಿವಾಚಾರ್ಯ ಹಿರೇಮಠ, ಜಂಬಗಿ ಮುಧೋಳ ತಾಲ್ಲೂಕು, ಇವರನ್ನು ಸದರಿ ಪ್ರತಿಷ್ಠಾನದ ಸದಸ್ಯರನ್ನಾಗಿ ನೇಮಿಸಲಾಗಿರುತ್ತದೆ. ಮುಂದುವರೆದಂತೆ ಶ್ರೀ ಬಿ.ಪಿ. ಹಿರೇಸೋಮಣ್ಣವರ್, ಲೇಖಕರು, ಟೀಚರ್ಸ್ ಕಾಲೋನಿ, ಮುಧೋಳ, ಬಾಗಲಕೋಟೆ ಜಿಲ್ಲೆ, ಇವರನ್ನು ಈ ಪ್ರತಿಷ್ಠಾನಕ್ಕೆ ಸದಸ್ಯರನ್ನಾಗಿ ನೇಮಿಸಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 774 ಕಸಧ 2011, ಬೆಂಗಳೂರು, ದಿನಾಂಕ : 19–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ.ಪಿ. ಹಿರೇಸೋಮಣ್ಣವರ್, ಲೇಖಕರು, ಟೀಚರ್ಸ್ ಕಾಲೋನಿ, ಮುಧೋಳ, ಬಾಗಲಕೋಟೆ ಜಿಲ್ಲೆ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕವಿ ಚಕ್ರವರ್ತಿ ರನ್ನ ಪ್ರತಿಷ್ಠಾನಕ್ಕೆ ಸದಸ್ಯರನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

ಪಿ.ಆರ್. 1836

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ 07–08–1995.
2. ಮುಖ್ಯಮಂತ್ರಿಯವರ ಕಛೇರಿ ಟಿಪ್ಪಣಿ ಪತ್ರ ಸಂ: ಮುಮಂ/ಆ.ಕಾ./388/ಎನ್‌ಓಎಂ/2011, ದಿನಾಂಕ: 17–06–2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಮಂಡ್ಯ ಜಿಲ್ಲೆ ಕೃಷ್ಣರಾಜ ಪೇಟೆ ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 71 ಯೋವಿವಿ 2009 ಬೆಂಗಳೂರು, ದಿನಾಂಕ : 18–07–2011**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಆರು ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ. ಸಂ. | ತಾಲ್ಲೂಕು | ಹೆಸರು | ವರ್ಗ |
|---|---|---|---|
| 1 | ಕೃಷ್ಣರಾಜ ಪೇಟೆ ತಾಲ್ಲೂಕು (ಮಂಡ್ಯ ಜಿಲ್ಲೆ) | 1) ಶ್ರೀ ಮಂಜೇಗೌಡ ಬಿನ್ ನಂಜುಂಡೇಗೌಡ ನಾಯಕನಹಳ್ಳಿ, ಕೃಷ್ಣರಾಜ ಪೇಟೆ ತಾಲ್ಲೂಕು | ಸಾಮಾನ್ಯ |
| | | 2) ಶ್ರೀ ಚಂದ್ರಪ್ಪ ಬಿನ್ ವೀರಪ್ಪ ದುಡುಕನಹಳ್ಳಿ, ಅಕ್ಕಿಹೆಬ್ಬಾಳು ಅಂಚೆ, ಕೃಷ್ಣರಾಜಪೇಟೆ ಥಾಲ್ಲೂಕು | ಸಾಮಾನ್ಯ |
| | | 3) ಶ್ರೀ ನರಸಿಂಹಾಚಾರ್ ಬಿನ್ ನಾರಾಯಣಾಚಾರ್ ದೊಡ್ಡಿಗಾಡಿಗನಹಳ್ಳಿ, ಕೃಷ್ಣರಾಜಪೇಟೆ ತಾಲ್ಲೂಕು | ಹಿಂ. ವ |
| | | 4) ಶ್ರೀ ಜಮೀರ್ ಪಾಷಾ ಬಿನ್ ಅಬ್ದುಲ್ ಸತ್ತಾರ್ ಸಾಬ್ ಮಸೀದಿ ಬೀದಿ, ಸಿಂಧು ಘಟ್ಟ, ಕೃಷ್ಣರಾಜಪೇಟೆ ತಾಲ್ಲೂಕು | ಅ.ಸಂ. |
| | | 5) ಶ್ರೀಮತಿ ಸುಧಾ ಕೋಂ. ರಾಮಕೃಷ್ಣ ಮಂದಗೆರೆ, ಕೃಷ್ಣರಾಜಪೇಟೆ ತಾಲ್ಲೂಕು | ಮಹಿಳೆ |
| | | 6) ಶ್ರೀ ಎನ್. ಗೋಪಾಲ ಬಿನ್ ನಂಜಪ್ಪ ಊಗಿನಹಳ್ಳಿ, ಕೃಷ್ಣರಾಜಪೇಟೆ ತಾಲ್ಲೂಕು | ಎಸ್.ಸಿ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ –1 ಮತ್ತು 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 1837

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಕೆ.ಜಿ. ಶ್ರೀನಿವಾಸ್, ನಿವೃತ್ತ ಉಪ ಖಜಾನಾಧಿಕಾರಿ (ಸ್ವಪ್ರ) ಖಜಾನೆ ಇಲಾಖೆ, ಉಪ ಖಜಾನೆ ಕಡೂರು ಇವರ ವಿಳಂಬಿತ ನಿವೃತ್ತಿ ಸೌಲಭ್ಯಗಳ ಮೇಲೆ ಬಡ್ಡಿ ಪಾವತಿ: ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** 1) ಶಿವಮೊಗ್ಗ/ಸಿಜೆ (ಹಿರಿಯ ವಿಭಾಗ) ಸಿಜೆಎಂ/ನ್ಯಾಯಾಲಯದ ಸಿಸಿ ಸಂಖ್ಯೆ: 55/1992 ರ ತೀರ್ಪು ದಿ: 15-02-2006.

2) ಖಜಾನೆ ನಿರ್ದೇಶಕರ ಪತ್ರ ಸಂ: ಖ.ನಿ./ಶಿಶಾ/28/2000-01, ದಿನಾಂಕ: 29-04-2011.

**ಪ್ರಸ್ತಾವನೆ :**

ಶ್ರೀ ಕೆ.ಜಿ. ಶ್ರೀನಿವಾಸ್, ನಿವೃತ್ತ ಉಪ ಖಜಾನಾಧಿಕಾರಿ (ಸ್ವಪ್ರ) ಖಜಾನೆ ಇಲಾಖೆ, ಉಪ ಖಜಾನೆ ಕಡೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಚಕ್ರವರಾಹಿ ಯೋಜನೆ ಭೂ ಸ್ವಾಧೀನದ ಪ್ರಕರಣದಲ್ಲಿ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲಾಗಿತ್ತು. ಮೊಕದ್ದಮೆ ಜಾರಿಯಲ್ಲಿದ್ದಾಗ ಸದರಿ ಅಧಿಕಾರಿ 30-11-2001 ರಂದು ವಯೋನಿವೃತ್ತಿ ಹೊಂದಿದ್ದರು ಮೊಕದ್ದಮೆ ಬಾಕಿ ಇದ್ದ ಕಾರಣ ಅವರಿಗೆ ತಾತ್ಕಾಲಿಕ ನಿವೃತ್ತಿ ವೇತನ ಮಾತ್ರ ಬಿಡುಗಡೆ ಮಾಡಿ ಉಳಿದ ನಿವೃತ್ತಿ ಸೌಲಭ್ಯಗಳನ್ನು ತಡೆ ಹಿಡಿಯಲಾಯಿತು. ಆ ನಂತರ ಇವರ ವಿರುದ್ಧ ನಡೆಯುತ್ತಿದ್ದ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 55/1992ರಲ್ಲಿ ಶಿವಮೊಗ್ಗ/ಸಿಜೆ (ಹಿರಿಯ ವಿಭಾಗ) ಸಿಜೆಎಂ/ ನ್ಯಾಯಾಲಯವು ಮೇಲೆ -1ರಲ್ಲಿ ಓದಲಾದ 15-02-2006ರ ಆದೇಶದಲ್ಲಿ ಶ್ರೀ ಕೆ.ಜಿ. ಶ್ರೀನಿವಾಸ್ ಅವರನ್ನು ಖುಲಾಸೆಗೊಳಿಸಿದೆ. ಹಾಗೂ ಸದರಿ ಆದೇಶದ ವಿರುದ್ಧ ಇತರ ಆರೋಪಿಗಳ ವಿರುದ್ಧ ತೀರ್ಪನ್ನು ಪ್ರಶ್ನಿಸಿ ಮೇಲ್ಮನವಿ ಸಲ್ಲಿಸಲಾಗಿದ್ದರೂ ಈ ಅಧಿಕಾರಿ ವಿರುದ್ಧ ಸಲ್ಲಿಸಿಲ್ಲ. ಆದ್ದರಿಂದ ಖಜಾನೆ ನಿರ್ದೇಶಕರು, ದಿ: 25-05-2009 ರಂದು ಇವರ ತಡೆಹಿಡಿಯಲ್ಪಟ್ಟ ಎಲ್ಲಾ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಾಡಿದರು. ಹಾಗೂ ಮೇಲೆ -2ರಲ್ಲಿ ಓದಲಾದ ದಿ: 29-04-2011ರ ಪತ್ರದಲ್ಲಿ ತಡವಾಗಿ ಪಾವತಿಸಲ್ಪಟ್ಟ ಉಪದಾನ ಹಾಗೂ ಗಳಿಕೆ ರಜೆ ನಗದೀಕರಣ ಮೊತ್ತದ ಮೇಲೆ ಒಟ್ಟು ರೂ. 1,35,810/- ಬಡ್ಡಿಯಾಗಿ ಪಾವತಿಸಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 87 ಆಖಇ 2011, ಬೆಂಗಳೂರು, ದಿನಾಂಕ : 18-07-2011**

ಶ್ರೀ ಕೆ.ಜಿ. ಶ್ರೀನಿವಾಸ್, ನಿವೃತ್ತ ಉಪ ಖಜಾನಾಧಿಕಾರಿ (ಸ್ವಪ್ರ) ಖಜಾನೆ ಇಲಾಖೆ, ಉಪ ಖಜಾನೆ ಕಡೂರು ಅವರಿಗೆ ತಡವಾಗಿ ಪಾವತಿಸಲ್ಪಟ್ಟ ನಿವೃತ್ತಿ ಸೌಲಭ್ಯಗಳಿಗೆ ಈ ಕೆಳಕಂಡಂತೆ ಬಡ್ಡಿಯನ್ನು ಪಾವತಿಸಲು ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಉಪದಾನದ ಮೊತ್ತ ರೂ. 1,37,600/- ಬಡ್ಡಿ ರೂ. 87,446/- ಗಳಿಕೆ ರಜೆ ನಗದೀಕರಣದ ಮೊತ್ತ ರೂ. 76,898- ಬಡ್ಡಿ ರೂ. 48,364/- ಒಟ್ಟು ರೂ. 1,35,810/-

ಈ ಆದೇಶವನ್ನು ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಆರ್ಥಿಕ ಇಲಾಖೆಯ ವಿಶ್ರಾಂತಿ ವೇತನ ಶಾಖೆಯ ಟಿಪ್ಪಣಿ: ಸಂಖ್ಯೆ: ಆಇ (ವಿ) 145 ಪಿಇಎನ್-1/2011, ದಿ: 07-07-2011ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1838 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ :** ವಾಣಿಜ್ಯ ತೆರಿಗೆ ಅಧಿಕಾರಿ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಶ್ರೀಮತಿ ಸಿ.ಎಂ. ಲಲಿತ ಇವರ ಜೇಷ್ಠತೆಯನ್ನು ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 27 ವಾತೆಸಿ 2004, ದಿನಾಂಕ 29-04-2004.

2) ವಾಣಿಜ್ಯ ತೆರಿಗೆ ಆಯುಕ್ತರ ಅಧಿಸೂಚನೆ ದಿನಾಂಕ: 26-08-2010.

3) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 117 ವಾತೆಸಿ 2010, ದಿನಾಂಕ 26-08-2010.

4) ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ: ಸಿಬ್ಬಂದಿ-1/ಜಿಪಿಸಿಆರ್-118/10-11, ದಿನಾಂಕ: 14-07-2011.

**ಪ್ರಸ್ತಾವನೆ :**

ಸರ್ಕಾರದ ಉಲ್ಲೇಖ (1)ರ ಆದೇಶದಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿಗಳ ವೃಂದದಲ್ಲಿ ಸ್ವತಂತ್ರ ಪ್ರಭಾರದಲ್ಲಿದ್ದ 372 ವಾಣಿಜ್ಯ ತೆರಿಗೆ ಪರಿವೀಕ್ಷಕರುಗಳನ್ನು ಕರ್ನಾಟಕ ನಾಗರೀಕ ಸೇವಾ (RPP & P) ನಿಯಾಮಾವಳಿಗಳು 1978 ನಿಯಮ 2(3) ರಡಿ ಸ್ಥಾನಪನ್ನ ಮುಂಬಡ್ತಿ ನೀಡಿ ವಾಣಿಜ್ಯ ತೆರಿಗೆ ಅಧಿಕಾರಿಗಳಾಗಿ ಸಕ್ರಮಗೊಳಿಸಲಾಯಿತು. ಈ ಆದೇಶದಲ್ಲಿ ಕ್ರಮ ಸಂಖ್ಯೆ: 329 ರಲ್ಲಿ ಶ್ರೀಮತಿ ಸಿ.ಎಂ. ಲಲಿತ ಇವರಿಗೆ ದಿನಾಂಕ 12-06-1998 ರಂದು ಸ್ಥಾನಪನ್ನ ಮುಂಬಡ್ತಿ ನೀಡಿದೆ.

ಉಲ್ಲೇಖ (2)ರಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು ವಾಣಿಜ್ಯ ತೆರಿಗೆ ನಿರೀಕ್ಷಕರ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿದ್ದು, ಅದರಲ್ಲಿ ಶ್ರೀಮತಿ ಸಿ.ಎಂ. ಲಲಿತ ಇವರ ಕ್ರಮ ಸಂಖ್ಯೆ 1415 ಆಗಿದ್ದು ಅವರು ತಿಳಿಸಿದ ನೌಕರರಾದ ಶ್ರೀಮತಿ ಸುಶೀಲಮ್ಮ ಮತ್ತು ಇವರ ಜೇಷ್ಠತಾ ಪಟ್ಟಿಯ ಸಂಖ್ಯೆ ಕ್ರಮವಾಗಿ 1460 ಆಗಿರುತ್ತದೆ. ಇದರಲ್ಲಿ ಶ್ರೀಮತಿ ಸಿ.ಎಂ. ಲಲಿತ ಇವರು ಹಿರಿಯರಾಗಿರುತ್ತಾರೆ.

ಉಲ್ಲೇಖ (3)ರ ಅಧಿಸೂಚನೆಯಲ್ಲಿ ಸರ್ಕಾರವು ವಾಣಿಜ್ಯ ತೆರಿಗೆ ಅಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿದ್ದು ಅದನ್ನು ಉಲ್ಲೇಖ (1)ರ ಆದೇಶದಲ್ಲಿ ಸಕ್ರಮಗೊಳಿಸಿದ ದಿನಾಂಕದ ಆಧಾರದ ಮೇಲೆ ಸಿದ್ದಪಡಿಸಿದ ಕಾರಣ ಶ್ರೀಮತಿ ಸಿ.ಎಂ. ಲಲಿತ ಇವರು ಶ್ರೀಮತಿ ಸುಶೀಲಮ್ಮ ಮತ್ತು ಶ್ರೀಮತಿ ವೆಂಕಟಲಕ್ಷ್ಮಮ್ಮ ಇವರ ಕೆಳಗೆ ಜೇಷ್ಠತೆಯನ್ನು ಪಡೆದಿರುತ್ತಾರೆ. ಈ ಬಗ್ಗೆ ಸದರಿ ಅಧಿಸೂಚನೆಯಲ್ಲಿಯೇ ಶ್ರೀಮತಿ ಲಲಿತ ಇವರು ಸಕ್ರಮಗೊಳಿಸಿದ ದಿನಾಂಕದ ಬಗ್ಗೆ ಪ್ರತ್ಯೇಕ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ವಾಣಿಜ್ಯ ತೆರಿಗೆ ಆಯುಕ್ತರು ಉಲ್ಲೇಖ(4)ರ ಪತ್ರದಲ್ಲಿ ತಮ್ಮ ಪತ್ರದಲ್ಲಿ ದಾಖಲೆಗಳನ್ನು ಪರಿಶೀಲಿಸಿ, ವಾಣಿಜ್ಯ ತೆರಿಗೆ ನಿರೀಕ್ಷಕರ ವೃಂದದಲ್ಲಿ ಪ್ರಕಟಿಸಿದ ದಿನಾಂಕ 10-09-2009 ಅಂತಿಮ ಜೇಷ್ಠತಾ ಪಟ್ಟಿಯಲ್ಲಿನ ಕ್ರಮಸಂಖ್ಯೆಯನ್ನು ಆಧರಿಸಿ, ಸದರಿ ಜೇಷ್ಠತಾ ಪಟ್ಟಿಯಲ್ಲಿ ಶ್ರೀಮತಿ ಸಿ.ಎಂ. ಲಲಿತ ಇವರು ಶ್ರೀಮತಿ ಎಂ. ಸುಶೀಲಮ್ಮ ಮತ್ತು ವೆಂಕಟಲಕ್ಷ್ಮಮ್ಮ ಇವರಿಗಿಂತ ಹಿರಿಯರಾಗಿರುವುದನ್ನು ಗಮನಿಸಿರುತ್ತಾರೆ. ಸರ್ಕಾರದ ಪತ್ರ ಸಂಖ್ಯೆ ಆಇ 336 ವಾತೆಸಿ 2009, ದಿನಾಂಕ 27-11-2009ರಲ್ಲಿ ಕೆಳಕಂಡಂತೆ ಸ್ಪಷ್ಟೀಕರಣ ನೀಡಲಾಗಿತ್ತು.

ವಾಣಿಜ್ಯ ತೆರಿಗೆ ನಿರೀಕ್ಷಕರ ವೃಂದದಲ್ಲಿ ಹಿರಿಯರಾದ ಕಾರಣ ವಾಣಿಜ್ಯ ತೆರಿಗೆ ಅಧಿಕಾರಿ ವೃಂದಕ್ಕೆ ಪದೋನ್ನತಿ ನೀಡುವಾಗ ಶ್ರೀಮತಿ. ಸಿ.ಎಂ. ಲಲಿತ ಇವರನ್ನು ಪರಿಗಣಿಸಬೇಕಾಗುತ್ತದೆ. ಆದರೆ, ಸ್ಥಾನಪನ್ನ ಮುಂಬಡ್ತಿ ನೀಡುವಾಗ ಇವರಿಗಿಂತ ಕಿರಿಯ ನೌಕರರನ್ನು ಅವರ ಮೇಲೆ ಪರಿಗಣಿಸಿರುವುದು ತಪ್ಪಾಗಿರುತ್ತದೆ. ನಿಯಮಾನುಸಾರ ಶ್ರೀಮತಿ ಸಿ.ಎಂ. ಲಲಿತ ಇವರು ಶ್ರೀಮತಿ ಸುಶೀಲಮ್ಮ ಮತ್ತು ಶ್ರೀಮತಿ ವೆಂಕಟಲಕ್ಷ್ಮಮ್ಮ ಇವರಿಗಿಂತ ಹಿರಿಯರಾದ ಕಾರಣ ಹಾಗೂ ಸ್ಪಷ್ಟೀಕರಣದಂತೆ ಶ್ರೀಮತಿ ಸಿ.ಎಂ. ಲಲಿತ ಇವರನ್ನು ವಾಣಿಜ್ಯ ತೆರಿಗೆ ಅಧಿಕಾರಿಗಳ ಜೇಷ್ಠತಾ ಪಟ್ಟಿಯ ಬ್ಲಾಕ್ XXVI ರಲ್ಲಿ ಕ್ರಮ ಸಂಖ್ಯೆ 1426ರ ಕೆಳಗೆ ಮತ್ತು 1427ರ ಮೇಲೆ ವಾಣಿಜ್ಯ ತೆರಿಗೆ ನಿರೀಕ್ಷಕರ ಇಂಟರ್‌ಸೇ ಸೀನಿಯಾರಿಟಿ ಆಧಾರದ ಮೇಲೆ ಕಿರಿಯ ಅಧಿಕಾರಿಗಳಾದ ಶ್ರೀಮತಿ ಎನ್. ಸುಶೀಲಮ್ಮ ಮತ್ತು ಶ್ರೀಮತಿ ವೆಂಕಟಲಕ್ಷ್ಮಮ್ಮ ಇವರಿಗೆ ನೀಡಿದ ಅರ್ಹತಾ ದಿನಾಂಕವಾದ 13-07-1998ನ್ನೇ ನೀಡಬೇಕಾಗುತ್ತದೆ.

ಅದಕ್ಕನುಗುಣವಾಗಿ ವಾಣಿಜ್ಯ ತೆರಿಗೆ ಅಧಿಕಾರಿಗಳ ಜೇಷ್ಠತಾ ಪಟ್ಟಿಯ ಬ್ಲಾಕ್ XXVI ರ ಕ್ರಮಸಂಖ್ಯೆ 1497 ರಿಂದ ಶ್ರೀಮತಿ ಸಿ.ಎಂ. ಲಲಿತ ಇವರನ್ನು ಬ್ಲಾಕ್ XXVI ರ ಕ್ರಮಸಂಖ್ಯೆ 1426ರ ಕೆಳಗೆ ಹಾಗೂ 1427ರ ಮೇಲೆ 1426ಅ ಎಂದು ನಮೂದಿಸಿ, ಕಿರಿಯ ಅಧಿಕಾರಿಗಳಾದ ಶ್ರೀಮತಿ ಎನ್. ಸುಶೀಲಮ್ಮ ಇವರಿಗೆ ನೀಡಿದ ಅರ್ಹತಾ ದಿನಾಂಕವಾದ 13-10-1997ನ್ನು ನೀಡಿ ಸೇರಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 188 ವಾತೆಸಿ 2011, ಬೆಂಗಳೂರು, ದಿನಾಂಕ : 18-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗನುಗುಣವಾಗಿ ಶ್ರೀಮತಿ ಸಿ.ಎಂ. ಲಲಿತ, ವಾಣಿಜ್ಯ ತೆರಿಗೆ ಅಧಿಕಾರಿ ಇವರನ್ನು ದಿನಾಂಕ 26-08-2010ರಂದು ವಾಣಿಜ್ಯ ತೆರಿಗೆ ಅಧಿಕಾರಿ ಜೇಷ್ಠತಾ ಪಟ್ಟಿಯ ಬ್ಲಾಕ್ XXVI ರ ಕ್ರಮಸಂಖ್ಯೆ 1426ರ ಕೆಳಗೆ 1427ರ ಮೇಲೆ ಕೆಳಕಂಡಂತೆ 1426 (ಅ) ಎಂದು ಸೇರಿಸಿ, ಆದೇಶಿಸಿದೆ.

| ಕ್ರ.ಸಂ. | ಹೆಸರು | ವಾ.ತೆ.ಅ | ವಾ.ತೆ.ಪ ಕ್ರ.ಸಂ. | ವಾ.ತೆ.ಪ. ಜೇಷ್ಠತಾ ಪಟ್ಟಿಯನ್ವಯ | ಹುಟ್ಟಿದ ದಿನಾಂಕ | ಕೆಲಸಕ್ಕೆ ಸೇರಿದ ದಿನಾಂಕ | ವೃಂದಕ್ಕೆ ನೇಮಕಾತಿಯಾದ/ ಬಡ್ತಿ ಹೊಂದಿದ ದಿನಾಂಕ | ಅರ್ಹತೆ ದಿನಾಂಕ |
|---|---|---|---|---|---|---|---|---|
| 1426 | ಮುನಿಸ್ವಾಮಪ್ಪ (ಪ.ಜಾ.) | ಬಡ್ತಿ | 1407 | ಬಡ್ತಿ | 18.04.1953 | | 13.11.1995 | 13-10-1997 |
| 1426 ಅ | ಸಿ.ಎಂ. ಲಲಿತ (ಪ.ಜಾ.) | ಬಡ್ತಿ | 1415 | ಬಡ್ತಿ | 01.04. 1958 | 12.06. 1998 | 13.11.1995 | 13-10-1997 |
| 1427 | ಟಿ.ಕುಮಾರಸ್ವಾಮಿ (ಪ.ಜಾ.) | ಬಡ್ತಿ | 1418 | ಬಡ್ತಿ | 01.10 1955 | | 18-10-1997 | 13-10-1997 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಆರ್. ಚಂದ್ರಶೇಖರಾರಾಧ್ಯ**

ಪೀಠಾಧಿಕಾರಿ

ಪಿ.ಆರ್. 1839 ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿ ತೊಡಗಿರುವ ತಾಂತ್ರಿಕ ಸಹಾಯಕರ ಮಾಸಿಕ ಸಂಭಾವನೆಯನ್ನು ಹೆಚ್ಚಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 104 ಉಖಾಯೋ 2007 ಬೆಂಗಳೂರು, ದಿ: 05-06-2009
2) ಸರ್ಕಾರದ ಪತ್ರದ ಸಂಖ್ಯೆ: ಗ್ರಾಅಪ 70 ಉಖಾಯೋ 2009 ದಿನಾಂಕ: 14-07-2010.
3) ದಿನಾಂಕ: 25-06-2011 ರಂದು ನಡೆದ ರಾಜ್ಯ ಮಟ್ಟದ ಜಾಗೃತ ಸಮಿತಿಯ ಸಭೆಯಲ್ಲಿ ಸಮಿತಿಯ ಸದಸ್ಯರ ಸಲಹೆಯಂತೆ.

**ಪ್ರಸ್ತಾವನೆ :**

ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಅನುಷ್ಠಾನಗೊಳಿಸಿದ ಕಾಮಗಾರಿಗಳನ್ನು ನಿಗವಹಿಸಿ ಪರಿವೀಕ್ಷಣೆ ಮಾಡುವ ಸಲುವಾಗಿ ಹಾಗೂ ಯೋಜನೆಯ ಸಮರ್ಪಕ ಮತ್ತು ಪರಿಣಾಮಕಾರಿ ಅನುಷ್ಠಾನಕ್ಕಾಗಿ ಪ್ರತಿ ನಾಲ್ಕು ಗ್ರಾಮಪಂಚಾಯಿತಿಗಳಿಗೆ ಇಂಜಿನಿಯರಿಂಗ್ ಕಾಮಗಾರಿಗಳನ್ನು ಉಸ್ತುವಾರಿ ಮಾಡಲು ಒಬ್ಬ ತಾಂತ್ರಿಕ ಸಹಾಯಕರನ್ನು ಮತ್ತು ಅದೇ ಪ್ರತಿ ನಾಲ್ಕು ಗ್ರಾಮ ಪಂಚಾಯಿತಿಗಳಿಗೆ ತಾಲ್ಲೂಕು ಮಟ್ಟದಲ್ಲಿ ಕೃಷಿ, ತೋಟಗಾರಿಕೆ ಅರಣ್ಯ, ರೇಷ್ಮೆ, ಜಲಾನಯನ ಮತ್ತು ನೀರಾವರಿ ಇಲಾಖೆಯ ಕಾಮಗಾರಿಗಳನ್ನು ಉಸ್ತುವಾರಿ ಮಾಡಲು ಒಬ್ಬ ತಾಂತ್ರಿಕ ಸಹಾಯಕರನ್ನು ಹೊರಗುತ್ತಿಗೆಯ ಆಧಾರದ ಮೇಲೆ ಪಡೆಯಲು ಉಲ್ಲೇಖ (1)ರ ಆದೇಶದಲ್ಲಿ ಆದೇಶಿಸಲಾಗಿತ್ತು. ಉಲ್ಲೇಖ (1)ರ ಆದೇಶದಂತೆ ತಾಂತ್ರಿಕ ಸಹಾಯಕರ ಮಾಸಿಕ ಸಂಭಾವನೆಯನ್ನು 3000/- ರೂಗಳಿಗೆ ನಿಗದಿಪಡಿಸಲಾಗಿತ್ತು. ಮುಂದುವರೆದು ತಾಂತ್ರಿಕ ಸಹಾಯಕರಿಗೆ ನಿಗದಿಪಡಿಸಿದ ಮಾಸಿಕ ಸಂಭಾವನೆಯು ಕಡಿಮೆಯಾಗಿದ್ದು, ಕ್ಷೇತ್ರ ಮಟ್ಟದಲ್ಲಿ ಅನುಷ್ಠಾನಗೊಳಿಸಿದ ಕಾಮಗಾರಿಗಳನ್ನು ಪರಿವೀಕ್ಷಿಸುವ ಕಾರ್ಯಕ್ಕೆ ಮುಂದೆ ಬಾರದೆ ಇರುವುದರ ಕಾರಣದಿಂದ ಸಂಭಾವನೆಯನ್ನು ಹೆಚ್ಚಿಸುವುದು ಅವಶ್ಯಕವಾಗಿರುವುದರಿಂದ ಸಂಭಾವನೆಯನ್ನು 8000/- ರೂಗಳಿಗೆ ಹೆಚ್ಚಿಸಲಾಗಿತ್ತು.

ದಿನಾಂಕ: 25–06–2011 ರಂದು ನಡೆದ ರಾಜ್ಯ ಮಟ್ಟದ ಜಾಗೃತ ಸಮಿತಿಯಲ್ಲಿ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿ ತೊಡಗಿರುವ ತಾಂತ್ರಿಕ ಸಹಾಯಕರ ಮಾಸಿಕ ಸಂಭಾವನೆಯನ್ನು ವಿದ್ಯಾರ್ಹತೆಗಳಿಗೆ ಅನುಗುಣವಾಗಿ ನಿಗದಿಪಡಿಸಿ ಹೆಚ್ಚಿಸುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ಸಮಿತಿಯ ಸದಸ್ಯರು ತಮ್ಮ ಸಲಹೆಯನ್ನು ನೀಡಿರುತ್ತಾರೆ. ಆದುದರಿಂದ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿ ತೊಡಗಿರುವ ತಾಂತ್ರಿಕ ಸಹಾಯಕರಿಗೆ ಮಾಸಿಕ ಸಂಭಾವನೆಯನ್ನು ಹೆಚ್ಚಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 104 ಉಖಾಯೋ 2007, ಬೆಂಗಳೂರು, ದಿನಾಂಕ : 06–07–2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿ ಹೊರಗುತ್ತಿಗೆಯ ಆಧಾರದ ಮೇಲೆ ತೊಡಗಿರುವ ತಾಂತ್ರಿಕ ಸಹಾಯಕರಿಗೆ ಅವರವರ ವಿದ್ಯಾರ್ಹತೆಗಳಿಗೆ ಅನುಗುಣವಾಗಿ ಮಾಸಿಕ ಸಂಭಾವನೆಯನ್ನು ಈ ಕೆಳಕಂಡಂತೆ ನಿಗದಿಪಡಿಸಿ ತತ್‌ಕ್ಷಣದಿಂದಲೇ ಜಾರಿಗೆ ಬರಲು ಆದೇಶಿಸಲಾಗಿದೆ.

| ಕ್ರ.ಸಂ. | ವಿದ್ಯಾರ್ಹತೆಗಳು | ನಿಗದಿಪಡಿಸಿದ ಮಾಸಿಕ ಸಂಭಾವನೆ | ಷರಾ |
|---|---|---|---|
| 1. | ಡಿಪ್ಲೊಮ ಇನ್ ಸಿವಿಲ್ ಮತ್ತು ಗಣಕಯಂತ್ರದ ಜ್ಞಾನ ಕಡ್ಡಾಯ | ರೂ. 10,000/– | ಇಂಜಿನಿಯರಿಗ್ ಕಾಮಗಾರಿಗಳನ್ನು ಉಸ್ತುವಾರಿ ಮಾಡಲು |
| 2. | ಬಿ.ಇ. ಸಿವಿಲ್ ಮತ್ತು ಗಣಕಯಂತ್ರದ ಜ್ಞಾನ ಕಡ್ಡಾಯ | ರೂ. 12,000/– | ಇಂಜಿನಿಯರಿಗ್ ಕಾಮಗಾರಿಗಳನ್ನು ಉಸ್ತುವಾರಿ ಮಾಡಲು |
| 3 | ಕೃಷಿ ಅಥವಾ ಅರಣ್ಯ ಅಥವಾ ತೋಟಗಾರಿಕೆ ವಿಷಯದಲ್ಲಿ ಪದವಿಯನ್ನು ಪಡೆದಿರಬೇಕು ಮತ್ತು ಗಣಕಯಂತ್ರದ ಜ್ಞಾನ ಕಡ್ಡಾಯ | ರೂ. 10,000/– | ಕೃಷಿ, ಅರಣ್ಯ, ತೋಟಗಾರಿಕೆ, ನೀರಾವರಿ, ಜಲಾನಯನ ಇತರೆ ಇಲಾಖೆಯ ಕಾಮಗಾರಿಗಳನ್ನು ಉಸ್ತುವಾರಿ ಮಾಡಲು |

ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯಿತಿಗಳ ಮುಖ್ಯಕಾರ್ಯನಿರ್ವಾಹಕ ಅಧಿಕಾರಿಗಳು ತಮ್ಮ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಗ್ರಾಮಪಂಚಾಯಿತಿಗಳ ಸಂಖ್ಯೆಗೆ ಅನುಗುಣವಾಗಿ ಮತ್ತು ಉದ್ಯೋಗ ಚೀಟಿಗಳ ಸಂಖ್ಯೆಗೆ ಅನುಗುಣವಾಗಿ ತಾಂತ್ರಿಕ ಸಿಬ್ಬಂದಿ ಸೇವೆಯನ್ನು ಹೊರಗುತ್ತಿಗೆಯ ಆಧಾರದ ಮೇಲೆ ಜಿಲ್ಲಾ ಮಟ್ಟದಲ್ಲಿ ಪಾರದರ್ಶಕತೆಯ ನಿಯಮಗಳನ್ನು (KTPP rules) ಅನುಸರಿಸಿ ಪಡೆದುಕೊಳ್ಳಲು ಮತ್ತು ಅವಶ್ಯಕತೆಗೆ ಅನುಗುಣವಾಗಿ ಬಳಸಿಕೊಳ್ಳಲು ಅನುಮೋದನೆ ನೀಡಿದೆ. ಇದಕ್ಕೆ ತಗಲುವ ವೆಚ್ಚವನ್ನು ಯೋಜನೆಯ ಶೇಕಡಾ 6% ರಷ್ಟಿನ ಆಡಳಿತಾತ್ಮಕ ವೆಚ್ಚದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ.ಶಿವಶಂಕರ್**
ನಿರ್ದೇಶಕರು,
ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ
ಉದ್ಯೋಗ ಖಾತರಿ ಯೋಜನೆ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1840

## PERSONNEL AND ADMINISTRATIVE REFORMS SECRETARIAT

**Sub :** IPS (Appointment by Promotion) Regulations, 1955-Declaration of equivalence of the posts-reg.

**Read:** 1) Government Order No. DPAR 115 SPS 2010, dated 01.10.2010
2) UO Note No. HD 177 PoSiPa 2011 – dated 10.6.2011 of Home Department.
3) Letter No. CB-4/154/2010-11, dated 28.6.2011 of DG&IGP, Karnataka, Bangalore addressed to Principal Secretary to Government, Home Department.

**Preamble:**

In the Government Order No. DPAR 115 SPS 2010, dated 1.10.2010 read at (1) above, the posts of Dy.Superintendent of Police (Wireless), Asst. Commandant (KSRP) and Dy. Superintendent of Police (Armed) are declared as equivalent to the post of Dy. Superintendent of Police (Civil) i.e., the Principal Police Service of the State, u/r 2(j) of the IPS (Appointment by Promotion) Regulations, 1955, for the purpose of promotion to IPS in the promotional vacancies available for the year 2009. In the said GO, it is also ordered that only eligible officers of outstanding merit and ability with distinguished service in these Auxiliary police units of State Police Services shall be considered for promotion to IPS and for this purpose the officers proposed shall fulfill the following criteria:

(i) They should have completed at least 8 years of service in the grade of Dy.SP or equivalent grade.

(ii) They must have consistently ‘outstanding’ or ‘Very Good’ grading in the last 8 years Annual Performance Reports.

(iii) They should be recipients of the President of India’s Police Medal for the meritorious service and Police Medal for the distinguished service.

The Home Department in UO Note dated 10.6.2011 read at Sl.No. 2 above, has informed that on appointment to IPS, the officer concerned will have to work as District SP and later in higher posts. They should possess knowledge about maintenance of

law and order, prevention of crime, investigation of heinous crimes, prevention of atrocity against SC-ST etc. They should conduct periodical instructions of police stations and circle offices hold periodical crime review meetings and community police work. The officer should possess co-ordination abilities. Such ability is possible only when the officer works for many years as Dy.SP (Civil). The officers of Wireless Unit are experienced only in controlling wireless messages. The officers of Armed Police are called into action on special occasions whenever there is breach of peace and law and order. Similarly the officers of KSRP have limited experience and knowledge about maintenance of peace, law and order. And as such, it is not proper to declare the posts of Auxiliary police service units as equivalent to Dy.SP (Civil) and it is not in public interest.

The DG&IGP (HoPF), Karnataka, Bangalore in his letter dated 28.6.2011 has stated that, the nature of work of Civil and Armed Police officers are entirely different. The work of Civil Dy.SP is supervision of Sub-division. His duties involve the maintenance of law and order, prevention of crime, investigation of heinous cases such as dowry death cases, prevention of atrocity against SC-ST etc. The officers of Auxiliary Police Service do not perform the above functions. Their activities are restricted to keeping the Armed platoons in constant readiness and deployment for law and order duties and sending the platoons for assistance to the civil police officers. Their functions are in the nature of para-military forces like CRPF, BSF etc. The training given to civil police officers and the armed police officers is different.

The Civil Dy.Sps after their basic physical/law training at Karnataka Police Academy are posted to districts for about 10 months for their field training under the supervision of District SP and there they get acquainted with basic knowledge about District police set-up and working. Later, they are attached to rural and city/town police stations, police circles and then finally as Dy.SP of Sub-Division. They undergo training for 2 months in police special units like CID, Forest Cell, Civil Rights and Enforcement and State Crime Record Bureau. While in the post of Dy.Sp (Civil) they are attached to prosecution wing, where they attend course regularly to know about court proceeding and trial of criminal cases. They get knowledge of functional of executive magistrate when they are attached to Revenue Dy.Commissioner office, whereas the officers Auxiliary service after their basic training at KPA will not undergo any of the above field training and attachments. They are attached to their respective battalions and undergo training meant for Reserve police like ceremonial parades, target practice.

The functions and duties of armed police officers and KSRP officers are similar to the duties of officers of CRPF and BSF. The officers of Central para military forces such as CRPF, CIFF and BSF are not considered for promotion to the IPS cadre and the same criteria is applicable to State Armed police officers and KSRP. The DG&IGP has further stated that promotion of officers of Auxiliary police service to IPS may have adverse effect on civil police and also in the quality of service to the public.

Having regard to the facts and circumstances explained above, Government is of the considered view that the officers of Auxiliary Police Service Units are not suitable to be considered for promotion to the IPS under the IPS(Appointment by Promotion) Regulations in the promotion quota meant for State Police Service Officers. Therefore it has been decided to withdraw the Government Order to read at Sl.No. I above. Accordingly the following orders are issued.

**Government Order No. DPAR 115 SPS 2010, Bangalore, Dated: 21st July 2011**

After careful consideration of all aspects of the case explained in the preamble, the Government Order No. DPAR 115 SPS 2010, dated 1.10.2010 declaring the posts of Deputy Superintendent of Police (Wireless), Assistant Commandant (KSRP) and Deputy Superintendent of Police (Armed) as equivalent to the Deputy Superintendent of Police (Civil) i.e. Principal Police Service for the purpose of promotion to IPS under the IPS (Appointment by Promotion) Regulations is **'Rescinded'** with immediate effect.

By Order and in the name of the Governor of Karnataka

**Ashok.P.Atre**

P.R. 1841

Under Secretary to Government

DPAR (Services-IV)

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ :** ದಿನಾಂಕ: 3.7.2006 ರಂದ ಕರ್ನಾಟಕ ವಿಧಾನಸಭೆಯ ಅಧಿವೇಶನದಲ್ಲಿ ನಡೆದ ಚರ್ಚೆಯನ್ನು ದೂರದರ್ಶನದಲ್ಲಿ ಬಿತ್ತರಿಸಿರುವ ಬಗ್ಗೆ ವೆಚ್ಚ ಮರುಪಾವತಿ ಕುರಿತು.

**ಓದಲಾಗಿದೆ :**
(1) ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಕಾ/ 2026/2006, ದಿನಾಂಕ: 1.7.2006.
(2) ಕರ್ನಾಟಕ ವಿಧಾನಸಭೆಯ ಸಭಾಧ್ಯಕ್ಷರ ಪತ್ರ ಸಂಖ್ಯೆ: SPLA/PS/210/06, ದಿನಾಂಕ: 1.7.2006.
(3) ನಿರ್ದೇಶಕರು, ದೂರದರ್ಶನ ಕೇಂದ್ರ, ಬೆಂಗಳೂರು ಇವರ ಪತ್ರ ಸಂಖ್ಯೆ:ಬೆಂದೂದ/ಡಿಟಿಸಿ(ಎಂಜೆ)/2006/153 to 155 ದಿನಾಂಕ: 11.7.2006.
(4) ಕರ್ನಾಟಕ ವಿಧಾನಸಭೆಯ ಸಚಿವಾಲಯದ ಪತ್ರ ಸಂಖ್ಯೆ: ವಿಸಸ/ಶಾರಶಾ/555/ಅಕಾದೂಬಿ/2006, ದಿನಾಂಕ: 25.6.2009.
(5) ದೂರದರ್ಶನ ಕೇಂದ್ರ, ಬೆಂಗಳೂರು ಇವರ ಪತ್ರ ದಿನಾಂಕ: 27.4.2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿಯಲ್ಲಿ ದಿನಾಂಕ: 3.7.2006ರ ಸೋಮವಾರದಂದು ಕರ್ನಾಟಕ ವಿಧಾನಸಭೆ ಅಧಿವೇಶನದಲ್ಲಿ ರೂಲ್–69ರ ಮೇಲೆ ನಡೆಯಲಿರುವ ಸಂಪೂರ್ಣ ಚರ್ಚೆಯನ್ನು ದೂರದರ್ಶನದಲ್ಲಿ ಬಿತ್ತರಿಸಲು ಅಗತ್ಯ ಕ್ರಮ ಕೈಗೊಳ್ಳುವಂತೆ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರು ಸಭಾಧ್ಯಕ್ಷರ ಆಪ್ತ ಕಾರ್ಯದರ್ಶಿಯವರನ್ನು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ದಿನಾಂಕ: 3.7.2006ರಂದು ಕರ್ನಾಟಕ ವಿಧಾನಸಭೆ ಅಧಿವೇಶನದಲ್ಲಿ ನಡೆಯಲಿರುವ ಸಂಪೂರ್ಣ ಚರ್ಚೆಯನ್ನು ದೂರದರ್ಶನದಲ್ಲಿ ಬಿತ್ತರಿಸಬೇಕೆಂದು ಮಾನ್ಯ ಸಭಾಧ್ಯಕ್ಷರು ಆದೇಶಿಸಿರುವುದಾಗಿ ಮಾನ್ಯ ಸಭಾಧ್ಯಕ್ಷರ ಆಪ್ತ ಕಾರ್ಯದರ್ಶಿಯವರು ನಿರ್ದೇಶಕರು, ದೂರದರ್ಶನ ಕೇಂದ್ರ, ಬೆಂಗಳೂರು ಇವರಿಗೆ ತಿಳಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ದೂರದರ್ಶನ ಕೇಂದ್ರ, ಬೆಂಗಳೂರು ಇವರು ದಿನಾಂಕ: 3.7.2006 ರಿಂದ 6.7.2006ರವರೆಗೆ ವಿಧಾನಸಭೆಯ ಅಧಿವೇಶನದಲ್ಲಿ ನಡೆದ ನೇರ ಪ್ರಸಾರ ಒಟ್ಟು ಅವಧಿ 21 ಗಂಟೆಗಳಾಗಿದ್ದು, ರೂ. 8,20,923–00ನ್ನು ಪಾವತಿಸಲು ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ದೂರದರ್ಶನದಲ್ಲಿ ಪ್ರಸಾರ ಮಾಡಿದ ಖರ್ಚು ರೂ. 8,20,923–00ನ್ನು ಸರ್ಕಾರದಿಂದಲೇ ಭರಿಸಲು ಕ್ರಮ ಕೈಗೊಳ್ಳಬೇಕೆಂದು ಕರ್ನಾಟಕ ವಿಧಾನಸಭೆ ಸಚಿವಾಲಯವು ತಿಳಿಸಿದೆ.

ಮೇಲೆ(5)ರಲ್ಲಿ ಓದಲಾದ ಪತ್ರದಲ್ಲಿ ರೂ. 8,20,923–00ನ್ನು ತುರ್ತಾಗಿ ಪಾವತಿಸುವಂತೆ ದೂರದರ್ಶನ ಕೇಂದ್ರ, ಬೆಂಗಳೂರು ಇವರು ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಇ 47 ಸಂವ್ಯವಿ 2007, ಬೆಂಗಳೂರು, ದಿನಾಂಕ: 20.07.2011**

(Unique Code No……………………)

ದಿನಾಂಕ: 3.7.2006 ರಿಂದ ದಿನಾಂಕ: 6.7.2006ರ ಅವಧಿಗೆ ಕರ್ನಾಟಕ ವಿಧಾನಸಭೆಯಲ್ಲಿ ನಡೆದ ಚರ್ಚೆಯನ್ನು ದೂರದರ್ಶನದಲ್ಲಿ ಪ್ರಸಾರ ಮಾಡಿರುವ ಬಾಬ್ತು ರೂ. 8,20,923–00 (ಎಂಟು ಲಕ್ಷದ ಇಪ್ಪತ್ತು ಸಾವಿರದ ಒಂಭೈನೂರ ಇಪ್ಪತ್ಮೂರು ರೂಪಾಯಿಗಳು ಮಾತ್ರ) ನಿರ್ದೇಶಕರು, ದೂರದರ್ಶನ ಕೇಂದ್ರ ಬೆಂಗಳೂರು ಇವರಿಗೆ ಪಾವತಿಸಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಪ್ರಸ್ತುತ ಆರ್ಥಿಕ ವರ್ಷದ (2011–12ನೇ ಸಾಲಿನ) ಅನುದಾನದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಲೆಕ್ಕಶೀರ್ಷಿಕೆ 2052–00–090–0–01–051 ಸಾಮಾನ್ಯ ವೆಚ್ಚಗಳಡಿ ಲಭ್ಯವಿರುವ ಅನುದಾನದಲ್ಲಿ ಭರಿಸತಕ್ಕದ್ದು.

ರೂ. 8,20,923–00ನ್ನು ಚೆಕ್ ಮುಖಾಂತರ ನಿರ್ದೇಶಕರು, ದೂರದರ್ಶನ ಕೇಂದ್ರ, ಜೆ.ಸಿ.ನಗರ, ಬೆಂಗಳೂರು ಇವರಿಗೆ ಪಾವತಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 228 ವೆಚ್ಚ:10/2011, ದಿನಾಂಕ: 5.7.2011ರಲ್ಲಿ ನೀಡಿರುವ ಅನುಮೋದನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಜಿ. ಶ್ಯಾಮಲ**

ಸಹಾಯಕ ಪ್ರಾರೂಪಕಾರರು ಮತ್ತು ಪದನಿಮಿತ್ತ

ಪಿ.ಆರ್. 1842

ಸರ್ಕಾರದ ಉಪ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಹೆಚ್.ಎಲ್. ಲಿಂಗೇಗೌಡ ಮೇಲ್ವಿಚಾರಕರು ಸರ್ಕಾರಿ ಜಿಲ್ಲಾ ಮುದ್ರಣಾಲಯ, ಶಿವಮೊಗ್ಗ ಇವರಿಗೆ ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ದಿನಾಂಕ: 04–09–2010 ರ ಸರ್ಕಾರದ ಆದೇಶ ಸಂಖ್ಯೆ : ಇಡಿ 494 ಇಎಸ್‌ಡಬ್ಲ್ಯೂ 2009.
2) ದಿನಾಂಕ : 04–10–2010 ರ ಮುದ್ರಣ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ : ಡಿಪಿಎಸ್/ಇಎಸ್‌ಟಿ/19(08)/ಪಿ(ಪಿ)140/2010–11.
3) ದಿನಾಂಕ : 30–03–2011 ರ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ರವರ ಪತ್ರ ಸಂಖ್ಯೆ:ಡಿ.ಪಿ.ಎಸ್/ಎ.ಎಸ್.ಟಿ.–19(08)2010–11/ಪಿ(ಪಿ)295.

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಹೆಚ್.ಎಲ್. ಲಿಂಗೇಗೌಡ ಸರ್ಕಾರಿ ಜಿಲ್ಲಾ ಮುದ್ರಣಾಲಯ ಶಿವಮೊಗ್ಗ ಇವರಿಗೆ ಪ್ರಭಾರ ಭತ್ಯೆ ಮಂಜೂರು ಮಾಡಿ ಆದೇಶಿಸಲಾಗಿತ್ತು. ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಮುದ್ರಣ ಇಲಾಖೆಯ ನಿರ್ದೇಶಕರು ಶ್ರೀ ಲಿಂಗೇಗೌಡ ಇವರಿಗೆ ಮಂಜೂರು ಮಾಡಲಾದ ಪ್ರಭಾರ ಭತ್ಯೆಯ ಆದೇಶದಲ್ಲಿ ನಮೂದಾಗಿರುವ ವೇತನ ಶ್ರೇಣಿ 5,575–10,620 ಕ್ಕೆ ಬದಲಾಗಿ 10,800–20,025 ಎಂದು ತಿದ್ದುಪಡಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಮೇಲೆ (3) ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ದಿನಾಂಕ : 01–01–2008 ರಿಂದ 31–07–2008 ರವರೆಗಿನ ಅವಧಿಗೆ ವೇತನ ಶ್ರೇಣಿ 5,575–10,620 ರ ಕನಿಷ್ಠ ವೇತನಕ್ಕೆ ಶೇಕಡ 5 ರಷ್ಟನ್ನು ಹಾಗೂ ದಿನಾಂಕ: 01–08–2008 ರಿಂದ 31–12–2008 ರವರೆಗೆ ವೇತನ ಶ್ರೇಣಿ 10,800–20,025 ರ ಕನಿಷ್ಠ ವೇತನದ ಶೇಕಡ 5 ರಷ್ಟಕ್ಕೆ ಪ್ರಭಾರ ಭತ್ಯೆ ಮಂಜೂರು ಮಾಡುವಂತೆ ಕೋರಲಾಗಿದೆ.

2. ನಿರ್ದೇಶಕರ ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 246 ಇಎಸ್‌ಡಬ್ಲ್ಯೂ, 2010, ಬೆಂಗಳೂರು, ದಿನಾಂಕ: 19–07–2011**

ಶಿವಮೊಗ್ಗ, ಸರ್ಕಾರಿ ಜಿಲ್ಲಾ ಮುದ್ರಣಾಲಯದಲ್ಲಿ ಮೇಲ್ವಿಚಾರಕರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಹೆಚ್.ಎಲ್. ಲಿಂಗೇಗೌಡ ಇವರನ್ನು ಸಹಾಯಕ ನಿರ್ದೇಶಕರು (ತಾಂತ್ರಿಕ) ಖಾಲಿ ಹುದ್ದೆಯಲ್ಲಿ ಪ್ರಭಾರದಲ್ಲಿ ಇರಿಸಿದ ಈ ಕೆಳಕಂಡ ಅವಧಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 68 ರ ಪ್ರಕಾರ ಪ್ರಭಾರ ಭತ್ಯೆಯನ್ನು ಮಂಜೂರು ಮಾಡಿ ಆದೇಶಿಸಲಾಗಿದೆ.

| | | |
|---|---|---|
| ದಿನಾಂಕ : 1–1–2008 ರಿಂದ 31–07–2008 ರವರೆಗೆ | ವೇತನ–ಶ್ರೇಣಿ 5,575–10,620 | ಕನಿಷ್ಠವೇತನದ ಶೇಕಡ 5 ರಷ್ಟು |
| ದಿನಾಂಕ : 1–8–2008 ರಿಂದ 31–12–2008 ರವರೆಗೆ | ವೇತನ ಶ್ರೇಣಿ 10,800–20,025 | ಕನಿಷ್ಠ ವೇತನದ ಶೇಕಡ 5 ರಷ್ಟು |

4. ಸದರಿಯವರು ಪ್ರಭಾರದಲ್ಲಿದ್ದ ಅವಧಿಯಲ್ಲಿ ಗಳಿಕೆ ರಜೆ/ಪರಿವರ್ತಿತ ರಜೆ/ಇನ್ನಿತರೆ ದೀರ್ಘಾವಧಿ ರಜೆ ತೆಗೆದುಕೊಂಡಿದ್ದಲ್ಲಿ ಆ ಅವಧಿಗೆ ಪ್ರಭಾರ ಭತ್ಯೆಗೆ ಅರ್ಹರಾಗುವುದಿಲ್ಲ.

5. ಈ ಆದೇಶವನ್ನು ದಿನಾಂಕ: 11.05.2011 ರ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಶಿಇ 296 ಐಎಫ್ಎಸ್ 2011 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಪಟಗಾರ್**

ಪಿ.ಆರ್. 1843 ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ)

ಶಿಕ್ಷಣ ಇಲಾಖೆ

## ತೋಟಗಾರಿಕಾ ಸಚಿವಾಲಯ

**ವಿಷಯ :** ದಿನಗೂಲಿ ಕೆಲಸಕ್ಕೆ ಸೇರಿದ ನಂತರ ಎಸ್.ಎಸ್.ಎಲ್.ಸಿ. ತೇರ್ಗಡೆ ಹೊಂದಿರುವ ದಿನಗೂಲಿ ನೌಕರರನ್ನು ಗ್ರೂಪ್-ಸಿ ಹುದ್ದೆಯಲ್ಲಿ ಸಕ್ರಮಗೊಳಿಸಿರುವ ನೌಕರರನ್ನು ಗ್ರೂಪ್-ಡಿ ಹುದ್ದೆಗೆ ಸಕ್ರಮಗೊಳಿಸುವ ಬಗ್ಗೆ – 5 ಗ್ರೂಪ್-ಡಿ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ :**
1) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ/10/2ಎಫ್/ದಿಗೂನೌ/ಖಾಯಂ/80/I/91-92, ದಿನಾಂಕ: 29-12-1992.
2) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ/10/2ಎಫ್/ದಿಗೂನೌ/ಖಾಯಂ/80/III/91-92, ದಿನಾಂಕ: 29-12-1992.
3) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಇವರ ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ/2/ದಿಗೂನೌ/ಖಾಯಂ/26/93-94, ದಿನಾಂಕ: 5-5-1995.
4) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಇವರ ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ/2/ದಿಗೂನೌ/ಸಕ್ರಮ/Iಎ/94-95, ದಿನಾಂಕ: 29-3-1997.
5) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್ಎಲ್ಸಿ 90, ದಿನಾಂಕ: 6-8-90 ಮತ್ತು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸೇಸ್ಥಅ 94, ದಿನಾಂಕ: 20-10-94.
6) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಇವರ ಪತ್ರ ಸಂಖ್ಯೆ: ಸಿಬ್ಬಂದಿ(2)/ಸಂಸಿ/24/2007-08, ದಿನಾಂಕ: 25-4-2008, 26-4-08, 26-6-09 ಮತ್ತು 28-5-10.

**ಪ್ರಸ್ತಾವನೆ:**

ರೇಷ್ಮೆ ಇಲಾಖೆಯಲ್ಲಿ ದಿನಗೂಲಿ ಕೆಲಸಕ್ಕೆ ಸೇರಿದ ನಂತರ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವ ದಿನಗೂಲಿ ನೌಕರರಾದ ಶ್ರೀ ವಿ. ಬಾಲಸುಬ್ರಮಣ್ಯ, ಶ್ರೀಮತಿ ಅನಸೂಯ, ರೇಷ್ಮೆ ಪ್ರವರ್ತಕರುಗಳು, (ಸಂಖ್ಯಾತಿರಿಕ್ತ), ಶ್ರೀ ಕೆ.ಎನ್. ಚಂದ್ರ, ಶ್ರೀಮತಿ ಸಾವಿತ್ರಮ್ಮ ಮತ್ತು ಶ್ರೀ ಬಿ. ರಾಜಪ್ಪ, ದ್ವಿತೀಯ ದರ್ಜೆ ಸಹಾಯಕರುಗಳು (ಸಂಖ್ಯಾತಿರಿಕ್ತ) ಇವರುಗಳು ಮೇಲೆ ಓದಲಾದ ಕ್ರಮಸಂಖ್ಯೆ (1), (2), (3) ಮತ್ತು (4)ರ ಆದೇಶಗಳಂತೆ ಗ್ರೂಪ್-ಸಿ ಹುದ್ದೆಯಲ್ಲಿ ಸಕ್ರಮಗೊಂಡಿದ್ದು, ಇವರುಗಳು ಸೇವೆಗೆ ಸೇರಿದ ನಂತರ ಎಸ್.ಎಸ್.ಎಲ್.ಸಿ. ಪರೀಕ್ಷೆ ಪಾಸು ಮಾಡಿರುವುದರಿಂದ ಇವರುಗಳನ್ನು ಸಂಖ್ಯಾತಿರಿಕ್ತ ಗ್ರೂಪ್-ಸಿ ಹುದ್ದೆಯಲ್ಲಿ ಸಕ್ರಮಗೊಳಿಸಿರುವುದು ನಿಯಮಗಳಿಗೆ ವಿರುದ್ಧವಾಗಿರುವುದರಿಂದ ಇವರುಗಳ ವಿರುದ್ಧ ದೂರು ಬಂದಿದ್ದರಿಂದ ಈ ಎಲ್ಲಾ ನೌಕರರುಗಳನ್ನು ಗ್ರೂಪ್-ಡಿ ಹುದ್ದೆಯಲ್ಲಿ ಸಕ್ರಮಗೊಳಿಸಬೇಕಾಗಿರುವ ಹಿನ್ನೆಲೆಯಲ್ಲಿ ಇಲಾಖೆಯು ಈ ಎಲ್ಲಾ ನೌಕರರಿಗೆ ಕಾರಣ ಕೇಳಿ ನೋಟೀಸ್ ಜಾರಿ ಮಾಡಿ ಲಿಖಿತ ಹೇಳಿಕೆಯನ್ನು ನೌಕರರಿಂದ ಪಡೆದು ಈ ಎಲ್ಲಾ ನೌಕರರು ಕೆಲಸಕ್ಕೆ ಸೇರಿದ ನಂತರ ಎಸ್.ಎಸ್.ಎಲ್.ಸಿ. ಪರೀಕ್ಷೆ ಪಾಸು ಮಾಡಿರುವುದರಿಂದ ಅವರು ಮೇಲೆ ಓದಲಾದ ಕ್ರಮಸಂಖ್ಯೆ (5) ರ ಆದೇಶಗಳಲ್ಲಿಯ ಷರತ್ತುಗಳನ್ನು ಪೂರೈಸಿರುವುದಿಲ್ಲವಾದ್ದರಿಂದ ಈ ನೌಕರರುಗಳನ್ನು ಅವರು ಈಗಿರುವ ಗ್ರೂಪ್-ಸಿ ಹುದ್ದೆಯಿಂದ ಗ್ರೂಪ್-ಡಿ ಹುದ್ದೆಗಳಲ್ಲಿ ಮುಂದುವರೆಸುವುದು ಅನಿವಾರ್ಯವಾದ್ದರಿಂದ ಸಂಖ್ಯಾತಿರಿಕ್ತ ಗ್ರೂಪ್-ಡಿ ಹುದ್ದೆಗಳನ್ನು ಸೃಜಿಸಿ ಸಕ್ರಮಗೊಳಿಸಲು ಆದೇಶ ನೀಡುವಂತೆ ರೇಷ್ಮೆ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (6) ರ ಪತ್ರಗಳಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಆಯುಕ್ತರ ಪ್ರಸ್ತಾವನೆಯಲ್ಲಿಯ ವಿವರಗಳನ್ನು ಪರಿಶೀಲಿಸಲಾಗಿ, ನೌಕರರಾದ ಶ್ರೀ ವಿ. ಬಾಲಸುಬ್ರಮಣ್ಯ, ರೇಷ್ಮೆ ಪ್ರವರ್ತಕರು, (ಸಂ) ಇವರು ದಿನಗೂಲಿ ನೌಕರರಾಗಿ ದಿನಾಂಕ: 30-6-1981 ರಲ್ಲಿ ಕೆಲಸಕ್ಕೆ ಸೇರಿದ್ದು, ಏಪ್ರಿಲ್-1983 ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಶ್ರೀ ಕೆ.ಎನ್. ಚಂದ್ರ, ದ್ವಿತೀಯ ದರ್ಜೆ ಸಹಾಯಕರು (ಸಂ) ಇವರು ದಿನಾಂಕ: 20-11-1982ರಲ್ಲಿ ದಿನಗೂಲಿ ನೌಕರರಾಗಿ ಕೆಲಸಕ್ಕೆ ಸೇರಿದ್ದು, ಏಪ್ರಿಲ್-1984 ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಶ್ರೀಮತಿ ಅನಸೂಯ, ರೇಷ್ಮೆ ಪ್ರವರ್ತಕರು (ಸಂ) ಇವರು ದಿನಾಂಕ: 12-11-1983ರಲ್ಲಿ ದಿನಗೂಲಿ ನೌಕರರಾಗಿ ಕೆಲಸಕ್ಕೆ ಸೇರಿದ್ದು, ಏಪ್ರಿಲ್-1984 ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಶ್ರೀಮತಿ ಸಾವಿತ್ರಮ್ಮ, ದ್ವಿತೀಯ ದರ್ಜೆ ಸಹಾಯಕರು (ಸಂ) ಇವರು ದಿನಾಂಕ: 5-5-1981ರಲ್ಲಿ ದಿನಗೂಲಿ ನೌಕರರಾಗಿ ಕೆಲಸಕ್ಕೆ ಸೇರಿದ್ದು, ಏಪ್ರಿಲ್-1982 ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಶ್ರೀ ಬಿ. ರಾಜಪ್ಪ, ದ್ವಿತೀಯ ದರ್ಜೆ ಸಹಾಯಕರು (ಸಂ) ಇವರು ದಿನಾಂಕ: 1-9-1980ರಲ್ಲಿ ದಿನಗೂಲಿ ನೌಕರರಾಗಿ ಕೆಲಸಕ್ಕೆ ಸೇರಿದ್ದು, ಏಪ್ರಿಲ್-1990 ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಇವರು ದಿನಗೂಲಿ ನೌಕರರಾಗಿ ನೇಮಕಗೊಂಡ ದಿನಾಂಕದ ನಂತರ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವುದರಿಂದ ರೇಷ್ಮೆ ಆಯುಕ್ತರು ತಿಳಿಸಿರುವಂತೆ ಇವರನ್ನು ಗ್ರೂಪ್-ಸಿ ಹುದ್ದೆಯ ಕಾರ್ಯನಿರ್ವಹಿಸಲು ದಿನಗೂಲಿ ನೌಕರರಾಗಿ ನೇಮಕ ಮಾಡಿಕೊಂಡಿಲ್ಲವಾದ್ದರಿಂದ ಮತ್ತು ದಿನಗೂಲಿ ನೌಕರರನ್ನು ಖಾಯಂಗೊಳಿಸುವ ವಿಷಯಕ್ಕೆ ಸಂಬಂಧಿಸಿದಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಹೊರಡಿಸಲಾಗಿರುವ ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್ಎಲ್ಸಿ 90, ದಿನಾಂಕ: 6-8-90ರ ಷರತ್ತುಗಳನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸೇಸ್ಥಅ 94, ದಿನಾಂಕ: 20-10-94 ರಲ್ಲಿಯ ಷರತ್ತುಗಳನ್ನು ಅನುಸರಿಸಿ, ನಿರ್ದಿಷ್ಟ ಹುದ್ದೆಯ

ಕಾರ್ಯನಿರ್ವಹಿಸಲು ನೇಮಕ ಹೊಂದಿರಬೇಕು ಮತ್ತು ಆ ಹುದ್ದೆಯ ಕೆಲಸಗಳನ್ನು 10 ವರ್ಷಗಳವರೆಗೆ ಮಾಡಿರಬೇಕು ಹಾಗೂ ಹುದ್ದೆಗೆ ನಿಗದಿಪಡಿಸಿರುವ ಶೈಕ್ಷಣಿಕ ಅರ್ಹತೆಯನ್ನು ನೇಮಕಾತಿ ನಿಯಮಗಳ ಪ್ರಕಾರ ಹೊಂದಿರಬೇಕು ಎಂಬ ಷರತ್ತುಗಳನ್ನು ಪ್ರಸ್ತುತ ಹುದ್ದೆಯಲ್ಲಿ ಈ ನೌಕರರು ಪೂರೈಸಿರುವುದಿಲ್ಲ. ಈ ಬಗ್ಗೆ ನೌಕರರಿಂದ ಸಮಜಾಯಿಸಿ ಕೋರಿ ನೋಟೀಸ್ ಜಾರಿಗೊಳಿಸಿ ಅವರು ನೀಡಿರುವ ಲಿಖಿತ ಸಮರ್ಥನೆಯನ್ನು ಪರಿಶೀಲಿಸಿದ್ದು, ನೋಟೀಸಿಗೆ ನೀಡಿರುವ ಲಿಖಿತ ಹೇಳಿಕೆಯಲ್ಲಿ ನೌಕರರು ಗ್ರೂಪ್–ಸಿ ಹುದ್ದೆಯಲ್ಲಿ ಸಕ್ರಮಗೊಳಿಸಬೇಕಾದ ಬಗ್ಗೆ ಯಾವುದೇ ಸಮರ್ಥನೆಯನ್ನು ನೀಡಿರುವುದಿಲ್ಲ ಮತ್ತು ದಾಖಲೆಗಳನ್ನು ಒದಗಿಸಿರುವುದಿಲ್ಲ. ಈ ನೌಕರರನ್ನು ಗ್ರೂಪ್–ಸಿ ಹುದ್ದೆಯ ಕಾರ್ಯನಿರ್ವಹಿಸಲು ಮೂಲತಃ ನೇಮಕಾತಿ ಮಾಡಿಲ್ಲವಾದ್ದರಿಂದ, ಗ್ರೂಪ್–ಸಿ ಹುದ್ದೆಯ ಕಾರ್ಯನಿರ್ವಹಿಸುವ ಪ್ರಶ್ನೆ ಉದ್ಭವಿಸುವುದಿಲ್ಲವಾದ್ದರಿಂದ, ಮತ್ತು ದಿನಗೂಲಿ ನೌಕರರಾಗಿ ನೇಮಕಗೊಂಡ ನಂತರ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದರಿಂದ, ದಿನಾಂಕ: 20–4–94ರ ಆದೇಶದಲ್ಲಿ ಸ್ಪಷ್ಟಪಡಿಸಿರುವ ಷರತ್ತುಗಳನ್ನು ಪೂರೈಸದೇ ಇರುವುದರಿಂದ ಈ ನೌಕರರು ಮೂಲತಃ ದಿನಗೂಲಿ ಸೇವೆಗೆ ಸೇರಿದಾಗ ಯಾವ ಹುದ್ದೆಗೆ ನೇಮಕವಾಗಿದ್ದರೋ ಮತ್ತು ಆ ಅವಧಿಯಲ್ಲಿ ಯಾವ ವಿದ್ಯಾರ್ಹತೆ ಹೊಂದಿದ್ದರೋ ಆ ಹುದ್ದೆಯಲ್ಲಿ ಇವರನ್ನು ಸಕ್ರಮಗೊಳಿಸಬೇಕಾಗಿರುತ್ತದೆಯೆಂದು ಸರ್ಕಾರವು ನಿರ್ಧರಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 79 ರೇಇವಿ 2009, ಬೆಂಗಳೂರು, ದಿನಾಂಕ: 18–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಸಕ್ರಮಗೊಂಡಿರುವ ಶ್ರೀ ಬಿ. ರಾಜಪ್ಪ, ದ್ವಿತೀಯ ದರ್ಜೆ ಸಹಾಯಕರು, ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಮಂಗಳೂರು (ಕ್ರಮ ಸಂಖ್ಯೆ–61) ಮೇಲೆ ಓದಲಾದ ಕ್ರಮಸಂಖ್ಯೆ (2) ರ ಆದೇಶದಲ್ಲಿ ಸಕ್ರಮಗೊಂಡಿರುವ ಶ್ರೀಮತಿ ಸಾವಿತ್ರಮ್ಮ, ದ್ವಿತೀಯ ದರ್ಜೆ ಸಹಾಯಕಿ, ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಮೈಸೂರು (ಕ್ರಮ ಸಂಖ್ಯೆ–28) ಶ್ರೀಮತಿ ವಿ. ಬಾಲಸುಬ್ರಮಣ್ಯಂ, ರೇಷ್ಮೆ ಪ್ರವರ್ತಕರು, ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಮೈಸೂರು, (ಕ್ರಮ ಸಂಖ್ಯೆ–39), ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಅಧಿಕೃತ ಜ್ಞಾಪನದಲ್ಲಿ ಸಕ್ರಮಗೊಂಡಿರುವ ಶ್ರೀಮತಿ ಅನಸೂಯ, ರೇಷ್ಮೆ ಪ್ರವರ್ತಕರು (ಕ್ರಮ ಸಂಖ್ಯೆ–87), ಮತ್ತು ಮೇಲೆ ಓದಲಾದ ಕ್ರಮ ಸಮಖ್ಯೆ (4)ರ ಅಧಿಕೃತ ಜ್ಞಾಪನದಲ್ಲಿ ಸಕ್ರಮಗೊಂಡಿರುವ ಶ್ರೀ ಕೆ.ಎನ್. ಚಂದ್ರ, ದ್ವಿತೀಯ ದರ್ಜೆ ಸಹಾಯಕರು, (ಕ್ರಮ ಸಂಖ್ಯೆ–77) ಇವರುಗಳನ್ನು ಗ್ರೂಪ್–ಸಿ ಹುದ್ದೆಯಲ್ಲಿ ಸಕ್ರಮಗೊಳಿಸುವುದಕ್ಕಾಗಿ ಸೃಜಿಸಿರುವ ಗ್ರೂಪ್–ಸಿ ಹುದ್ದೆಯನ್ನು ಈ ನೌಕರರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸೇಸ್ಥಅ 94, ದಿನಾಂಕ: 20–10–94 ರಲ್ಲಿ ಷರತ್ತುಗಳನ್ನು ಪೂರೈಸಿರುವುದಿಲ್ಲವಾದ್ದರಿಂದ ಈ ಕೂಡಲೇ ಜಾರಿಗೆ ಬರುವಂತೆ ಹಿಂದಕ್ಕೆ ಪಡೆದು ಇವರು ದಿನಗೂಲಿ ನೌಕರರಾಗಿ ನೇಮಕ ಹೊಂದಿದ ಸಮಯದಲ್ಲಿ ಹೊಂದಿದ ವಿದ್ಯಾರ್ಹತೆಯ ಆಧಾರದ ಮೇಲೆ ಮತ್ತು ನಿರ್ವಹಿಸಿದ ಕೆಲಸದ ಮೇಲೆ ಈ ನೌಕರರನ್ನು ಡಿ–ದರ್ಜೆಯ ಹುದ್ದೆಯಲ್ಲಿ ಸಕ್ರಮಗೊಳಿಸುವುದಕ್ಕಾಗಿ ಇಲಾಖೆಯಲ್ಲಿ ಗ್ರೂಪ್–ಡಿ ಹುದ್ದೆಗಳು ಖಾಲಿ ಇಲ್ಲದಿದ್ದಲ್ಲಿ ಮಾತ್ರ ಖಾಲಿ ಹುದ್ದೆಗಳು ಲಭ್ಯವಾಗುವವರೆಗೂ ಹಾಗೂ ಆದಷ್ಟು ಬೇಗ ಸದರಿಯವರನ್ನು ಮಂಜೂರಾದ ಹುದ್ದೆಗಳಲ್ಲಿ ಮರುವಿನ್ಯಾಸ ಮಾಡುವ ಷರತ್ತಿಗೊಳಪಟ್ಟು ಐದು ಸಂಖ್ಯಾತಿರಿಕ್ತ ಡಿ–ದರ್ಜೆ ಹುದ್ದೆಯನ್ನು ಸೃಜಿಸಲಾಗಿದೆ. ಈ ನೌಕರರನ್ನು ಡಿ–ವರ್ಗದ ಹುದ್ದೆಯ ಕಾರ್ಯನಿರ್ವಹಿಸಲು ನೇಮಕಾತಿ ಮಾಡುವ ಬಗ್ಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮತ್ತು ರೇಷ್ಮೆ ನಿರ್ದೇಶಕರು ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 35 ಸೇನಿಸಿ 2011, ದಿನಾಂಕ: 1/5–3–2011 ರಲ್ಲಿ ಹಾಗೂ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: 473/ಸೇ–1/2011, ದಿನಾಂಕ: 2–5–2011 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪಿ.ಆರ್. 1844

ಪೀಠಾಧಿಕಾರಿ,

ತೋಟಗಾರಿಕೆ ಇಲಾಖೆ (ರೇಷ್ಮೆ)

## ವಸತಿ ಸಚಿವಾಲಯ

**ವಿಷಯ :** ಕೋಲಾರ ಜಿಲ್ಲೆ, ಬಂಗಾರಪೇಟೆ ನಗರ ಆಶ್ರಯ ಸಮಿತಿಗೆ ಸದಸ್ಯರನ್ನು ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1999, ದಿನಾಂಕ: 10.05.2000.

(2) ಸರ್ಕಾರದ ಆದೇಶ ಸಂ.ವಇ/18/ಹೆಚ್‌ಎಎಸ್/2008, ದಿನಾಂಕ: 16.09.2009

(3) ಸರ್ಕಾರದ ಆದೇಶ ಸಂ:ವಇ 48 ಹೆಚ್‌ಎಎಸ್ 2008, ದಿನಾಂಕ: 24.11.2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ(2) ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಕೋಲಾರ ಜಿಲ್ಲೆ, ಬಂಗಾರಪೇಟೆ ನಗರ ಆಶ್ರಯ ಸಮಿತಿಗೆ ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಅಧಿಕಾರೇತರ ಸದಸ್ಯರನ್ನು ನೇಮಿಸಿ ಆದೇಶ ಹೊರಡಿಸಲಾಗಿತ್ತು. ಆದರೆ ಸದರಿ ಆದೇಶದಲ್ಲಿರುವ ಶ್ರೀ ಕೆ.ಎಂ. ನಾರಾಯಣಸ್ವಾಮಿ ಬಿನ್ ಮುನಿಯಪ್ಪ ಇವರ ಸದಸ್ಯತ್ವವನ್ನು ರದ್ದುಗೊಳಿಸಿ ಅವರ ಸ್ಥಾನಕ್ಕೆ ಶ್ರೀ ಎಂ. ಸುಗೇಂದ್ರನ್ ಬಿನ್ ಮುರುಗೇಶ್‌ರವರನ್ನು ಸದಸ್ಯರನ್ನಾಗಿ ನೇಮಿಸಲು ಸೂಚಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ವಇ 15 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ: 20ನೇ ಜುಲೈ 2011**

ಕೋಲಾರ ಜಿಲ್ಲೆ, ಬಂಗಾರಪೇಟೆ ನಗರ ಆಶ್ರಯ ಸಮಿತಿಗೆ ಈ ಮೊದಲು ನೇಮಿಸಿದ್ದ ಅಧಿಕಾರೇತರ ಸದಸ್ಯರಾದ ಶ್ರೀ ಕೆ.ಎಂ. ನಾರಾಯಣಸ್ವಾಮಿ ಬಿನ್ ಮುನಿಯಪ್ಪ, ನಂ. 4701, ಎಂ.ವಿ.ಐ. ರಸ್ತೆ, ವಿಜಯನಗರ, ಬಂಗಾರಪೇಟೆ ಇವರ ಸದಸ್ಯತ್ವವನ್ನು ರದ್ದುಗೊಳಿಸಿ, ಅವರ ಸ್ಥಾನದಲ್ಲಿ ಶ್ರೀ ಎಂ. ಸುಗೇಂದ್ರನ್ ಬಿನ್ ಮುರುಗೇಶ್, ನಂ. 4979, ಕುಪ್ಪಸ್ವಾಮಿ ಮೊದಲಿಯಾರ್ ಬಡಾವಣೆ, ಬಂಗಾರಪೇಟೆ ಇವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1845

**ಸಾವಿತ್ರಿ**

ಪೀಠಾಧಿಕಾರಿ–2 ವಸತಿ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ Dee Vee Power ಇವರಿಗೆ 2 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ವಿದ್ಯುತ್ ಯೋಜನಾ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆ ನೀಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/03/F152/DVP/2011/1971 ದಿನಾಂಕ: 7.7.2011.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಮೆ॥ Dee Vee Power ಇವರಿಗೆ ಕೊಡಗು ಜಿಲ್ಲೆಯ, ಸೋಮವಾರಪೇಟೆ ತಾಲ್ಲೂಕಿನ, ಕುಶಾಲನಗರದ, ಕೆ.ಐ.ಎ.ಡಿ.ಬಿ. ಕೈಗಾರಿಕಾ ಪ್ರದೇಶದಲ್ಲಿ 2 ಮೆ.ವ್ಯಾ. ಸಾಮರ್ಥ್ಯದ ಜೈವಿಕ ಇಂಧನ ವಿದ್ಯುತ್ ಯೋಜನಾ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 305 ಎನ್‌ಸಿಇ 2011, ಬೆಂಗಳೂರು, ದಿನಾಂಕ: 20-07-2011**

ಮೆ॥ Dee Vee Power ಇವರಿಗೆ ಕೊಡಗು ಜಿಲ್ಲೆಯ, ಸೋಮವಾರಪೇಟೆ ತಾಲ್ಲೂಕಿನ, ಕುಶಾಲನಗರದ, ಕೆ.ಐ.ಎ.ಡಿ.ಬಿ. ಕೈಗಾರಿಕಾ ಪ್ರದೇಶದಲ್ಲಿ 2 ಮೆ.ವ್ಯಾ. ಸಾಮರ್ಥ್ಯದ ಜೈವಿಕ ಇಂಧನ ವಿದ್ಯುತ್ ಯೋಜನಾ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿದೆ.

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into wheeling and banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited.
3. The company shall obtain necessary statutory clearance wherever required from the respective Departments/Organizations such as Forest Department. Revenue Department & Karnataka State Pollution Control Board, etc. for the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1846

**ಸುರೇಶ್.ಬಿ.ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಸುಳ್ಳು ಜಾತಿ ಪ್ರಮಾಣ ಪತ್ರ ಪಡೆದವರ ವಿರುದ್ಧದ ವ್ಯಾಜ್ಯ ನಿರ್ವಹಿಸಲು ಶ್ರೀ ಸಿ. ಜಗದೀಶ್, ವಕೀಲರು ಇವರನ್ನು ವಿಶೇಷ ನ್ಯಾಯವಾದಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ:ಸಕ ಇ 38 ಎಸ್‌ಎಡಿ 2005, ದಿನಾಂಕ: 02.07.2007.

(2) ಸರ್ಕಾರದ ಆದೇಶ ಸಂಖ್ಯೆ:ಸಕ ಇ 57 ಎಸ್‌ಎಡಿ 2010, ದಿನಾಂಕ: 08-12-2010.

(3) ಶ್ರೀ ಸಿ. ಜಗದೀಶ್, ಇವರು ದಿನಾಂಕ: 20-06-2011 ರಂದು ಬರೆದ ಪತ್ರ.

**ಪ್ರಸ್ತಾವನೆ:**

ಶ್ರೀ ಸಿ. ಜಗದೀಶ್, ವಕೀಲರು ಇವರನ್ನು ರಾಜ್ಯದಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರಗಳಿಗೆ ಸಂಬಂಧಿಸಿದ ಪ್ರಕರಣಗಳನ್ನು ನಿರ್ವಹಿಸಲು ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ವಿಶೇಷ ನ್ಯಾಯವಾದಿಯನ್ನಾಗಿ ನೇಮಿಸಲಾಗಿತ್ತು. ನಂತರ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಸಿ. ಜಗದೀಶ್ ಇವರ ಸೇವೆಯನ್ನು ದಿನಾಂಕ: 02-07-2010 ರಿಂದ ಇನ್ನೂ ಮೂರು ವರ್ಷಗಳ ಅವಧಿಗೆ ಮುಂದುವರೆಸಲು ಆದೇಶಿಸಲಾಗಿತ್ತು. ಈ ಮಧ್ಯೆ ಶ್ರೀ ಸಿ. ಜಗದೀಶ್ ಇವರು ಕೆಲವು ಪ್ರಕರಣಗಳಿಗೆ ಸಂಬಂದಿಸಿದಂತೆ ಸೂಚನೆಗಳನ್ನು ನೀಡುವಂತೆ ಕೋರಿರುತ್ತಾರೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 119 ಎಸ್‌ಎಡಿ 2011, ಬೆಂಗಳೂರು, ದಿನಾಂಕ: 12-07-2011**

ರಾಜ್ಯದಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರಗಳಿಗೆ ಸಂಬಂಧಿಸಿದ ದಾಖಲಾಗುವ ಪ್ರಕರಣಗಳಲ್ಲಿ ಮಾನ್ಯ ಉಚ್ಛ ನ್ಯಾಯಾಲಯ, ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಹಾಗೂ ಮೇಲ್ಮನವಿ ಪ್ರಾಧಿಕಾರಗಳ ಮುಂದೆ ಹಾಜರಾಗಲು ಶ್ರೀ ಸಿ. ಜಗದೀಶ್, ವಿಶೇಷ ನ್ಯಾಯವಾದಿ ಇವರಿಗೆ ಅನುಮತಿ ನೀಡಲಾಗಿದೆ. ಅಂತಹ ಯಾವುದೇ ಪ್ರಕರಣದಲ್ಲಿ ಅವರಿಂದ ಪತ್ರ ಬಂದಾಗ ಸಂಬಂಧಪಟ್ಟ ಇಲಾಖೆಯ ವ್ಯಾಜ್ಯ ನಿರ್ವಹಣಾಧಿಕಾರಿ/ ಶಪಥ ಪತ್ರ ಪ್ರಮಾಣೀಕರಿಸುವ ಅಧಿಕಾರಿ ಕಂಡಿಕೆ-ವಾರು ಟಿಪ್ಪಣಿ ಹಾಗೂ ಸಂಬಂಧಪಟ್ಟ ದಾಖಲಾತಿಗಳೊಡನೆ ವಿಶೇಷ ನ್ಯಾಯವಾದಿ ಇವರನ್ನು ಸಂಪರ್ಕಿಸಿ ಆಕ್ಷೇಪಣೆಗಳ ಹೇಳಿಕೆ ತಯಾರಿಸಿಕೊಂಡು ಪ್ರಮಾಣೀಕರಿಸಲು ಅಗತ್ಯ ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1847

**ಎಸ್. ಲೋಕನಾಥರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ-2

ಸಮಾಜ ಕಲ್ಯಾಣ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಬಸವರಾಜು ಮಾಳಪ್ಪ ಮೆಳವಂಕಿ, ತಹಶೀಲ್ದಾರ್ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 51 ಎಎಸ್‌ಡಿ 2008, ದಿನಾಂಕ: 23–05–2008.

(2) ಶ್ರೀ ಬಸವರಾಜು ಮಾಳಪ್ಪ ಮೆಳವಂಕಿ, ತಹಶೀಲ್ದಾರ್‌ರವರ ಮನವಿ ಪತ್ರ ದಿನಾಂಕ: 11–06–2008.

(3) ಮಾನ್ಯ ಪೊಲೀಸ್ ಆಯುಕ್ತರು, ಹುಬ್ಬಳ್ಳಿ ಧಾರವಾಡರವರು ಇವರ ಪತ್ರ ಸಂ:ಸಿಪಿ/ಸಿಬ್ಬಂದಿ–1/14/2008, ದಿನಾಂಕ: 03–06–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ: 23–05–2008ರ ಅಧಿಸೂಚನೆಯಲ್ಲಿ ಶ್ರೀ ಬಸವರಾಜು ಮಾಳಪ್ಪ ಮೆಳವಂಕಿ ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗ್ರೂಪ್–ಬಿ ಹುದ್ದೆಗೆ ನೇಮಕಗೊಂಡಿರುತ್ತಾರೆ. ಮೇಲೆ ಕ್ರಮ ಸಂಖ್ಯೆ (2) ರ ದಿ: 11–06–2008 ರ ಪತ್ರದಲ್ಲಿ ಶ್ರೀಯುತರು, ಗೃಹ ಇಲಾಖೆಯಲ್ಲಿ ಪೊಲೀಸ್ ಸಬ್‌ಇನ್‌ಸ್ಪೆಕ್ಟರ್ ಆಗಿ ಸಲ್ಲಿಸಿರುವ ಸೇವೆಯನ್ನು ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತೆ ಕೋರಿರುತ್ತಾರೆ

ಶ್ರೀಯುತರ ಮನವಿಯನ್ನು ಹಾಗೂ ಸೇವಾ ಪುಸ್ತಕವನ್ನು ಪರಿಶೀಲಿಸಲಾಗಿ ಶ್ರೀ ಬಸವರಾಜು ಮಾಳಪ್ಪ ಮೆಳವಂಕಿ, ಇವರು ಪೊಲೀಸ್ ಮಹಾ ನಿರ್ದೇಶಕರು, ಬೆಂಗಳೂರು ಇವರ ಆದೇಶ ಕ್ರಮ ಸಂಖ್ಯೆ: ಇಎಸ್‌ಟಿ (1)39/2005–06, ದಿನಾಂಕ: 17–8–2009ರನ್ವಯ ಪೊಲೀಸ್ ಸಬ್ ಇನ್‌ಸ್ಪೆಕ್ಟರ್ ಆಗಿ ನೇಮಕಗೊಂಡಿದ್ದು ನಂತರ, ಪೊಲೀಸ್ ಸಬ್ ಇನ್‌ಸ್ಪೆಕ್ಟರ್ ಸಂಚಾರಿ ಪೊಲೀಸ್ ಠಾಣೆ ಧಾರವಾಡ ಇವರ ಪತ್ರ ಸಂಖ್ಯೆ:599/2008, ದಿನಾಂಕ: 05–06–2008ರಂದು ಸೇವೆಯಿಂದ ಬಿಡುಗಡೆ ಹೊಂದಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿನಾಂಕ: 03–06–2008ರ ಪತ್ರದನ್ವಯ ಶ್ರೀಯುತರು ಪೊಲೀಸ್ ಸಬ್ ಇನ್‌ಸ್ಪೆಕ್ಟರ್ ಹುದ್ದೆಯಿಂದ ಗೆಜೆಟೆಡ್ ಪ್ರೊಬೆಷನರ್ ಬಿ ಹುದ್ದೆಗೆ ಆಯ್ಕೆ ಹೊಂದಿರುವುದರಿಂದ ಪೊಲೀಸ್ ಇಲಾಖೆಯಿಂದ ಬಿಡುಗಡೆಗೊಳಿಸಲಾಗಿದೆ.

ಮೇಲಿನ ಅಂಶಗಳನ್ನು ಪರಿಗಣಿಸಿ ಶ್ರೀ ಬಸವರಾಜು ಮಾಳಪ್ಪ ಮೆಳವಂಕಿ, ಹಿಂದಿನ ಪೊಲೀಸ್ ಸಬ್ ಇನ್‌ಸ್ಪೆಕ್ಟರ್, ಗೃಹ ಇಲಾಖೆ ದಿನಾಂಕ: 01–09–2005 ರಿಂದ 05–06–2008 ರವರೆಗಿನ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 224(ಎ) ರೀತ್ಯ ಪೊಲೀಸ್ ಸಬ್ ಇನ್‌ಸ್ಪೆಕ್ಟರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾ ದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: 307 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 12–07–2011**

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಬಸವರಾಜು ಮಾಳಪ್ಪ ಮೆಳವಂಕಿ, ತಹಶೀಲ್ದಾರ್ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಗೃಹ ಇಲಾಖೆಯಲ್ಲಿ ಪೊಲೀಸ್ ಸಬ್‌ಇನ್‌ಸ್ಪೆಕ್ಟರ್ ಆಗಿ ದಿ: 01–09–2005 ರಿಂದ 05–06–2008 ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 224(ಎ) ರೀತ್ಯ ಸದರಿಯವರ ಪೊಲೀಸ್ ಸಬ್ ಇನ್‌ಸ್ಪೆಕ್ಟರ್ ಹುದ್ದೆಯ ನಿಯೋಜನೆಗೆ ಅರ್ಹದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ (ವೆಚ್ಚ–7)ರವರ ಟಿಪ್ಪಣಿ ಸಂಖ್ಯೆ:ಆ.ಇ.1037/ವೆಚ್ಚ–7 2009, ದಿನಾಂಕ: 19–11–2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1848

## ಕಂದಾಯ ಸಚಿವಾಲಯ

**ವಿಷಯ :** ಭಾರತೀಯ ಪರಂಪರೆ ಉದ್ಯಾನವನವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ನಿರ್ಮಿಸುವ ಬಗ್ಗೆ ರೂಪುರೇಷೆಗಳನ್ನು ಶಿಫಾರಸ್ಸು ಮಾಡಲು ಸಮಿತಿ ರಚಿಸುವ ಕುರಿತು.

**ಪ್ರಸ್ತಾವನೆ :**

2011–12ನೇ ಸಾಲಿನ ಆಯವ್ಯಯದಲ್ಲಿ ಭಾರತೀಯ ಪರಂಪರೆ ಉದ್ಯಾನವನವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ರೂ. 100.00 ಕೋಟಿ ವೆಚ್ಚದಲ್ಲಿ ನಿರ್ಮಿಸಲು ಸರ್ಕಾರವು ಘೋಷಣೆ ಮಾಡಿದೆ.

ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಅವಶ್ಯವಾದ ರೂಪುರೇಷೆಗಳನ್ನು ಶಿಫಾರಸ್ಸು ಮಾಡಲು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಸಮಿತಿಯನ್ನು ರಚಿಸಲು ಸರ್ಕಾರವು ನಿರ್ಧರಿಸಿದೆ :–

| | | |
|---|---|---|
| 1 | ಮಾನ್ಯ ಮುಜರಾಯಿ ಸಚಿವರು | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ | ಸದಸ್ಯ–ಕಾರ್ಯದರ್ಶಿಗಳು |
| 3 | ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 4 | ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ | ಸದಸ್ಯ ಸಂಚಾಲಕರು |
| 5 | ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ | ಸದಸ್ಯರು |
| 6 | ಶ್ರೀ ಎಂ.ಪಿ. ಕುಮಾರ್, ಛೇರ್ಮನ್, ಗ್ಲೋಬಲ್ ಎಡ್ಸ್ | ಸದಸ್ಯರು |
| 7 | ಡಾ॥ ಟಿ. ಶ್ಯಾಮ್ ಸುಂದರ್, ಛೇರ್ಮನ್, ಯುಗಯಾತ್ರಿ | ಸದಸ್ಯರು |
| 8 | ಪ್ರೊ॥ ಕೆ.ವಿ. ರಾಜು, ಮುಖ್ಯಮಂತ್ರಿಗಳ ಆರ್ಥಿಕ ಸಲಹೆಗಾರರು | ಸದಸ್ಯರು |
| 9 | ಶ್ರೀ ರಾಮಸ್ವಾಮಿ, ಫೀಡ್‌ಬ್ಯಾಕ್ ಇನ್‌ಫ್ರಾಸ್ಟಕ್ಚರ್ | ಸದಸ್ಯರು |
| 10 | ಡಾ॥ ವಿಶ್ವನಾಥ್, ಅಧ್ಯಕ್ಷರು, ಕಾಮಗಾರಿ ಗುಣನಿಯಂತ್ರಣ ಕಾರ್ಯಪಡೆ | ಸದಸ್ಯರು |

ಅದರಂತೆ ಕೆಳಕಾಣಿಸಿದಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 173 ಮುಅಬಿ 2011, ಬೆಂಗಳೂರು, ದಿನಾಂಕ : 18ನೇ ಜುಲೈ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಭಾರತೀಯ ಪರಂಪರೆ ಉದ್ಯಾನವನವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲು ಅವಶ್ಯವಾದ ರೂಪುರೇಷೆಗಳನ್ನು ಶಿಫಾರಸ್ಸು ಮಾಡುವ ಸಲುವಾಗಿ ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡ ಸಮಿತಿಯನ್ನು ರಚಿಸಿ ಆದೇಶಿಸಿದೆ :-

| ಕ್ರ.ಸಂ | ಮಹನೀಯರುಗಳು | ಪದನಾಮ |
|---|---|---|
| 1 | ಮಾನ್ಯ ಮುಜರಾಯಿ ಸಚಿವರು | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ | ಸದಸ್ಯ ಕಾರ್ಯದರ್ಶಿಗಳು |
| 3 | ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 4 | ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ | ಸದಸ್ಯರು |
| 5 | ಶ್ರೀ ಎಂ.ಪಿ. ಕುಮಾರ್, ಛೇರ್ಮನ್, ಗ್ಲೋಬಲ್ ಎಡ್ಜ್ | ಸದಸ್ಯರು |
| 6 | ಡಾ॥ ಟಿ. ಶ್ಯಾಮ್ ಸುಂದರ್, ಛೇರ್ಮನ್, ಯುಗಯಾತ್ರಿ | ಸದಸ್ಯರು |
| 7 | ಪ್ರೊ॥ ಕೆ.ವಿ. ರಾಜು, ಮುಖ್ಯಮಂತ್ರಿಗಳ ಆರ್ಥಿಕ ಸಲಹೆಗಾರರು | ಸದಸ್ಯರು |
| 8 | ಶ್ರೀ ಬಿ. ರಾಮಸ್ವಾಮಿ, ಫೀಡ್‌ಬ್ಯಾಕ್ ಇನ್‌ಫ್ರಾಸ್ಟಕ್ಚರ್ | ಸದಸ್ಯರು |
| 9 | ಡಾ॥ ವಿಶ್ವನಾಥ್, ಅಧ್ಯಕ್ಷರು, ಕಾಮಗಾರಿ ಗುಣನಿಯಂತ್ರಣ ಕಾರ್ಯಪಡೆ | ಸದಸ್ಯರು |
| 10 | ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು | ಸದಸ್ಯ ಸಂಚಾಲಕರು |

ಸಮಿತಿಯು ಭಾರತೀಯ ಪರಂಪರೆಯನ್ನು ಬಿಂಬಿಸುವ ಒಂದು **"ಹೈಟೆಕ್ ಥೀಮ್ ಪಾರ್ಕ್"** ನಿರ್ಮಿಸುವ ಬಗ್ಗೆ ಪ್ರಸ್ತಾವನೆ ಸಿದ್ಧಪಡಿಸುವುದು.

ಪ್ರಸ್ತಾವನೆಯಲ್ಲಿ ಸರ್ಕಾರದ ಮತ್ತು ಭಾಗಿಯಾಗುವ ಸಂಸ್ಥೆಗಳ ಪಾತ್ರಗಳು ಏನೆಂಬುದರ ಬಗ್ಗೆ ನಿಗಧಿಗೊಳಿಸುವುದು ಹಾಗೂ ಈ ಯೋಜನೆಯನ್ನು ಕಾರ್ಯಗತಗೊಳಿಸುವ ಬಗ್ಗೆ ನೀಲಿ ನಕ್ಷೆಯನ್ನು ಸಿದ್ಧಪಡಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 1849 ಕಂದಾಯ ಇಲಾಖೆ (ಮುಜರಾಯಿ).

## ಒಳಾಡಳಿತ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಒಇ 224 ಪಿಪಿಇ 2011 (ಭಾಗ-1), ಬೆಂಗಳೂರು, ದಿನಾಂಕ : 18-7-2011.**

**ವಿಷಯ :** ಕ್ರಿಮಿನಲ್ ಮೊಕದ್ದಮೆಗಳನ್ನು ಪರಿಣಾಮಕಾರಿಯಾಗಿ ಅಭಿಯೋಜಕರು ನಡೆಸದೇ ಇರುವ ಬಗ್ಗೆ ಅವರ ಮೇಲೆ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ದಿನಾಂಕ : 4-6-2011ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸುವಾಗ ಕ್ರಿಮಿನಲ್ ಮೊಕದ್ದಮೆಗಳ ಶಿಕ್ಷೆಯ ಪ್ರಕರಣದಲ್ಲಿ ಇಳಿಕೆ ಕಂಡುಬಂದಿದ್ದು, ಆ ಬಗ್ಗೆ ಅಭಿಯೋಜಕರ ಕಾರ್ಯವೈಖರಿ ಸುಧಾರಿಸುವ ಹಾಗೂ ತಪ್ಪಿತಸ್ಥ ಅಭಿಯೋಜಕರ ಮೇಲೆ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಲು ನಿರ್ಧರಿಸಲಾಗಿದೆ.

ದಿ ಕರ್ನಾಟಕ ಕಂಡಕ್ಟ್ ಆಫ್ ಗೌರ್ನಮೆಂಟ್ ಲಿಟಿಗೇಷನ್ ರೂಲ್ಸ್, 1985ರಲ್ಲಿ 9ನೇ ಭಾಗದಲ್ಲಿ ಅಭಿಯೋಜಕರು ಕ್ರಿಮಿನಲ್ ಮೊಕದ್ದಮೆಗಳನ್ನು ಸಮರ್ಪಕವಾಗಿ ನಡೆಸುವಲ್ಲಿ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಪ್ಯಾರಾ 20(1) ರಿಂದ (5) ರವರೆಗೆ ಅಭಿಯೋಜಕರ ಕರ್ತವ್ಯಗಳನ್ನು ಸ್ಪಷ್ಟಪಡಿಸಲಾಗಿದೆ. ಆದಕಾರಣ, ಅಭಿಯೋಜಕರು ಸಮರ್ಪಕವಾಗಿ ಪ್ರಕರಣಗಳನ್ನು ನಡೆಸದೇ ಇದ್ದಲ್ಲಿ ಅವರ ಕರ್ತವ್ಯ ಲೋಪದ ಬಗ್ಗೆ ಸಂಬಂಧಪಟ್ಟ ಅಭಿಯೋಜಕರ ವಾರ್ಷಿಕ ನಿರ್ವಹಣಾ ವರದಿಯಲ್ಲಿ ನಮೂದಿಸಲು ನಿರ್ಧರಿಸಲಾಗಿದೆ.

ಆದ್ದರಿಂದ, ಪ್ರತಿಯೊಬ್ಬ ಅಭಿಯೋಜಕರು ಈ ಕೆಳಕಂಡ ಕರ್ತವ್ಯಗಳನ್ನು ತಪ್ಪದೇ ನಿರ್ವಹಿಸಬೇಕೆಂದು ದಿ ಕರ್ನಾಟಕ ಕಂಡಕ್ಟ್ ಗೌರ್ನಮೆಂಟ್ ಲಿಟಿಗೇಷನ್ ರೂಲ್ಸ್ ಭಾಗ-9 ರಲ್ಲಿ ನಮೂದಿಸಲಾಗಿರುತ್ತದೆ.

1. ನ್ಯಾಯಾಲಯವು ಆರೋಪಿತರ ಮೇಲೆ ಆಪಾದನೆ ಹೊರಿಸುವಾಗ ಸರಿಯಾಗಿ ಅಪರಾಧಿಕ ಕಲಂಗಳನ್ನು ಆಪಾದನೆಯನ್ನು ಹೊರಿಸಲಾಗಿದೆಯೋ ಇಲ್ಲವೋ ಎಂಬ ಬಗ್ಗೆ ಅಭಿಯೋಜಕರುಗಳು ಗಮನಿಸಿ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು, ಹಾಗೂ ಅವಶ್ಯವಿದ್ದಲ್ಲಿ ಆಪಾದನೆಯ ತಿದ್ದುಪಡಿಗಾಗಿ ಸೂಕ್ತ ಅರ್ಜಿಯನ್ನು ಸಲ್ಲಿಸಿ ಸರಿಯಾಗಿ ಆಪಾದನೆಗಳನ್ನು ನ್ಯಾಯಾಲಯದಿಂದ ಮಾಡಿಸತಕ್ಕದ್ದು.

2. ಅಭಿಯೋಜಕರು ಕ್ರಿಮಿನಲ್ ಮೊಕದ್ದಮೆಗಳಲ್ಲಿ ಸಾಕ್ಷಿದಾರರಿಗೆ ಹಾಜರಾತಿಯ ಸಲುವಾಗಿ ಅವಶ್ಯವಾದ ಸಮನ್ಸ್, ವಾರೆಂಟ್‌ಗಳನ್ನು ನ್ಯಾಯಾಲಯದಿಂದ ಹೊರಡಿಸಲು ಅವಶ್ಯ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು ಹಾಗೂ ಅವಶ್ಯವಿರುವ ಸಾಕ್ಷಿದಾರರನ್ನು ನ್ಯಾಯಾಲಯದಲ್ಲಿ ಹಾಜರುಪಡಿಸಲು ಪೊಲೀಸರಿಗೆ ಸೂಕ್ತವಾದ ಸಲಹೆಗಳನ್ನು ನೀಡುವುದು.

3. ಅಭಿಯೋಜಕರುಗಳು ಕ್ರಿಮಿನಲ್ ಮೊಕದ್ದಮೆಗಳನ್ನು ಅಭಿಯೋಜನೆಗೊಳಿಸುವಾಗ ಕಾನೂನಿಗನುಸಾರವಾಗಿ ಅವಶ್ಯವಿರುವ ಎಲ್ಲಾ ಸಾಕ್ಷಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ನ್ಯಾಯಾಲಯದ ಮುಂದೆ ತರತಕ್ಕದ್ದು ಹಾಗೂ ಕಡ್ಡಾಯವಾಗಿ ಅವರ ಸಾಕ್ಷಿಯನ್ನು ಪರೀಕ್ಷಿಸತಕ್ಕದ್ದು.

4. ಅಭಿಯೋಜಕರು ಕ್ರಿಮಿನಲ್ ಮೊಕದ್ದಮೆಗಳನ್ನು ಅಭಿಯೋಜನೆಗೊಳಿಸುವಾಗ ತನಿಖೆಯಲ್ಲಿ ಪಡೆದ ಹಾಗೂ ಅವಶ್ಯವಿರುವ ಸಾಕ್ಷ್ಯಾಧಾರಗಳನ್ನು ಮತ್ತು ಅವಶ್ಯವಿರುವ ದಾಖಲೆಗಳನ್ನು ನಿಶಾನೆಗಳನ್ನಾಗಿ ಹಾಗೂ ಪುರಾವೆಗಳನ್ನಾಗಿ ನ್ಯಾಯಾಲಯದ ಮುಂದೆ ತರತಕ್ಕದ್ದು ಹಾಗೂ ಅವಶ್ಯವಿರುವ ಮುದ್ದೇಮಾಲುಗಳನ್ನು ನ್ಯಾಯಾಲಯದಲ್ಲಿ ಸಂಬಂಧಪಟ್ಟ ಸಾಕ್ಷಿದಾರರಿಂದ ಗುರುತಿಸತಕ್ಕದ್ದು ಹಾಗೂ ಎಲ್ಲಾ ಸಾಕ್ಷ್ಯಾಧಾರಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ಆರೋಪಿತರ ಮೇಲೆ ಹೊರಸಿದ ಆಪಾದನೆಗಳು ರುಜುವಾತಾಗುವ ಬಗ್ಗೆ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

5. ಅಭಿಯೋಜಕರು ಕಛೇರಿಗೆ ಸಮಯಕ್ಕೆ ಸರಿಯಾಗಿ ಹಾಜರಾಗಿ ಸಾಕ್ಷಿದಾರರುಗಳಿಗೆ ಸಂಬಂಧಪಟ್ಟ ಪ್ರಕರಣದಲ್ಲಿ ಸಾಕ್ಷ್ಯ ನೀಡುವ ಬಗ್ಗೆ ಮನವರಿಕೆ ಮಾಡಿಕೊಟ್ಟು, ಆಯಾ ದಿನಾಂಕದಂದೇ ಬಂದ ಸಾಕ್ಷಿಗಳನ್ನು ಹಿಂದಕ್ಕೆ ಕಳುಹಿಸದೆ ವಿಚಾರಣೆ ಮಾಡಲು ಕ್ರಮ ಕೈಗೊಳ್ಳತಕ್ಕದ್ದು.

6. ನ್ಯಾಯಾಲಯಕ್ಕೆ ಅಭಿಯೋಜನದ ಪರವಾಗಿ ಪ್ರಕರಣದಲ್ಲಿ ಆರೋಪಿಗಳ ಮೇಲೆ ಆಪಾದನೆ ಸಿದ್ಧವಾಗಲು ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಹಾಗೂ ದಂಡ ಪ್ರಕ್ರಿಯಾ ಸಂಹಿತೆಯ ಕಲಂನಡಿಯಲ್ಲಿ ಅವಶ್ಯವಿರುವ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

7. ಡಿಫೆನ್ಸ್ ಸಾಕ್ಷಿಗಳನ್ನು ಪರಿಣಾಮಕಾರಿಯಾಗಿ ಮರು ಸವಾಲಿಗೆ ಅಳವಡಿಸತಕ್ಕದ್ದು ಹಾಗೂ ಮುದ್ದೆಮಾಲುಗಳ ಬಗ್ಗೆ ಸೂಕ್ತ ಪ್ರಶ್ನೆಗಳನ್ನು ಕೇಳತಕ್ಕದ್ದು.

8. ಟ್ರಯಲ್ ಅವಧಿ ಅನಾವಶ್ಯವಾಗಿ ಬೆಳೆಯದಂತೆ ಪದೇಪದೇ ಮುಂದೆ ಹಾಕುವುದನ್ನು ನಿಲ್ಲಿಸಲು ಕ್ರಮ ಜರುಗಿಸತಕ್ಕದ್ದು.

9. ಮೂಲ ಪರೀಕ್ಷೆ, ಪಾಟೀ ಸವಾಲು, ಮರು ಸವಾಲುಗಳನ್ನು ಪೂರ್ವ ತಯಾರಿಯೊಂದಿಗೆ ನಡೆಸಿ ಮೊಕದ್ದಮೆಯಲ್ಲಿ ಅಪರಾಧವನ್ನು ಸಿದ್ಧಪಡಿಸಲು ಎಲ್ಲಾ ಪ್ರಯತ್ನ ಮಾಡತಕ್ಕದ್ದು. ಇದರಲ್ಲಿ ನಿರ್ಲಕ್ಷತನ/ಅಪರಾಧಿಯ ವಕೀಲರೊಂದಿಗೆ ಶಾಮೀಲಾಗುವುದು/ಮರು ಸವಾಲು ಪಾಟೀ ಸವಾಲು ಮಾಡದಿರುವುದನ್ನು ಗಂಭೀರವಾಗಿ ಪರಿಗಣಿಸಿ ಶಿಕ್ಷೆಗೆ ಗುರಿಪಡಿಸಲಾಗುವುದು.

ಮೇಲೆ ಕಾಣಿಸಿದ ಅಭಿಯೋಜಕರುಗಳ ಕರ್ತವ್ಯದಲ್ಲಿ ಏನಾದರೂ ಲೋಪದೋಷಗಳು ಕಂಡುಬಂದಲ್ಲಿ ಹಾಗೂ ನಿರ್ಲಕ್ಷ್ಯತೆಯನ್ನು ತೋರಿದಲ್ಲಿ ಹಾಗೂ ತಪ್ಪಾದ ಆಪಾದನೆಗಳನ್ನು ಸರಿಪಡಿಸದೆ, ಸಾಕ್ಷಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸುವಲ್ಲಿ ಏನಾದರೂ ನ್ಯೂನತೆಗಳು ಅಭಿಯೋಜನೆ ಪರವಾಗಿ ಕಂಡುಬಂದಲ್ಲಿ ಆ ಬಗ್ಗೆ ಸಂಬಂಧಪಟ್ಟ ಅಭಿಯೋಜಕರುಗಳ ವಾರ್ಷಿಕ ನಿರ್ವಹಣಾ ವರದಿಯಲ್ಲಿ ಅವರ ತಪ್ಪುಗಳನ್ನು ನಮೂದಿಸಲಾಗುವುದು. ದೋಷಾರೋಪಣಾ ಪಟ್ಟಿ ಸಲ್ಲಿಸುವಾಗ ಅದರಲ್ಲಿ ನ್ಯೂನತೆಗಳಿದ್ದು, ಆ ನ್ಯೂನತೆಗಳಿಂದ ಪ್ರಕರಣ ಖುಲಾಸೆಗೊಂಡಲ್ಲಿ ಅಂತಹ ಪ್ರಕರಣಗಳನ್ನು ಗಂಭೀರವಾಗಿ ಪರಿಗಣಿಸಿ ಸಂಬಂಧಪಟ್ಟ ಅಭಿಯೋಜಕರ ಮೇಲೆ ಶಿಸ್ತು ಕ್ರಮ ಜರುಗಿಸಲಾಗುವುದು. ಈ ಬಗ್ಗೆ ಸಂಬಂಧಿಸಿದ ಎಲ್ಲಾ ಅಭಿಯೋಜನಾ ಇಲಾಖಾ ಅಧಿಕಾರಿಗಳು ನಿಯಮಾನುಸಾರ ಯೋಗ್ಯ ಕ್ರಮ ಕೈಗೊಳ್ಳತಕ್ಕದ್ದು.

**ಎಸ್.ಎಂ. ಜಾಮದಾರ**

ಪಿ.ಆರ್. ನಂ. 1850

ಸರ್ಕಾರದ ಪ್ರಧಾನ ಕಾರ್ಯದರ್ಶಿ
ಒಳಾಡಳಿತ ಇಲಾಖೆ.

## ಮುಖ್ಯ ಕಾರ್ಯದರ್ಶಿಯವರ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಸಿಆಸುಇ 43 ಸೇಇವಿ 2011 ಬೆಂಗಳೂರು, ದಿನಾಂಕ: 26-9-2011**

**ವಿಷಯ** : ಸರ್ಕಾರಿ ನೌಕರರ ವಿರುದ್ಧ ಅಭಿಯೋಜನಾ ಮಂಜೂರಾತಿ ನೀಡಲು ಅಧಿಕಾರ ಹೊಂದಿರುವ ಪ್ರಾಧಿಕಾರಿಗಳು ಕಾಲಮಿತಿ ಅನುಸರಿಸುವ ಬಗ್ಗೆ.

**ಉಲ್ಲೇಖ** :
1. ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 2 ಸೇಇವಿ 98 ದಿನಾಂಕ: 16-7-98.
2. ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 3 ಸೇಇವಿ 2001 ದಿನಾಂಕ: 24-03-2001.
3. ಸುತ್ತೋಲೆ ಸಂಖ್ಯೆ: ಸಿಆಸುಇ 31 ಸೇಇವಿ 2001 ದಿನಾಂಕ: 24-08-2001

ಸರ್ಕಾರಿ ನೌಕರರ ವಿರುದ್ಧ ನ್ಯಾಯಾಲಯದಲ್ಲಿ ಕಾನೂನು ಕ್ರಮ ಜರುಗಿಸಲು ಭ್ರಷ್ಟಾಚಾರ ತಡೆ ಅಧಿನಿಯಮ 1988 ರ ಪ್ರಕರಣ 19 ಮತ್ತು ದಂಡ ಪ್ರಕ್ರಿಯಾ ಸಂಹಿತೆಯ ಪ್ರಕರಣ 197 ರಡಿಯಲ್ಲಿ ಕ್ರಮ ಜರುಗಿಸಲು ಅಧಿಕಾರ ಹೊಂದಿರುವ ಪ್ರಾಧಿಕಾರಗಳು ಸರ್ಕಾರಿ ನೌಕರರ ವಿರುದ್ಧ ಮೊಕದ್ದಮೆ ಹೂಡುವುದಕ್ಕೆ ಅಭಿಯೋಜನಾ ಮಂಜೂರಾತಿ ನೀಡುವ ಮುನ್ನ ತಮ್ಮ ಮುಂದೆ ಮಂಡಿಸಲಾದ ದಾಖಲೆಗಳನ್ನು ಪರಿಶೀಲಿಸಿದ ನಂತರ ಅವರ ವಿರುದ್ಧ ಮೊಕದ್ದಮೆ ಹೂಡಲು ಮೇಲ್ನೋಟಕ್ಕೆ ಸಾಕಷ್ಟು ಆಧಾರಗಳಿವೆಯೇ ಎಂದು ಪರಿಶೀಲಿಸಿ ಮನದಟ್ಟು ಮಾಡಿಕೊಂಡ ನಂತರ ಅಭಿಯೋಜನಾ ಮಂಜೂರಾತಿಯನ್ನು ನೀಡುವ ಬಗ್ಗೆ ತೀರ್ಮಾನಿಸಲು ಉಲ್ಲೇಖದಲ್ಲಿ ತಿಳಿಸಿರುವ ಅಧಿಕೃತ ಜ್ಞಾಪನ/ಸುತ್ತೋಲೆಗಳಲ್ಲಿ ಸೂಚನೆಗಳನ್ನು ನೀಡಲಾಗಿದೆ. ಹಾಗೆಯೇ ಮಾನ್ಯ ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ (ಕ್ರಿಮಿನಲ್) ಸಂಖ್ಯೆಗಳು: 340-343/93- ವಿನೀತ್ ನಾರಾಯಣ್ ಮತ್ತು ಇತರರ ವಿರುದ್ಧ Union of India ಮತ್ತು ಇತರರ ಪ್ರಕರಣದಲ್ಲಿ ನೀಡಿರುವ ತೀರ್ಪಿನಲ್ಲಿ ವ್ಯಕ್ತಪಡಿಸಿರುವ ಕಾಲಮಿತಿಗಳಲ್ಲಿ (3 ತಿಂಗಳು ಮಾತ್ರ ಹಾಗೂ ಯಾವುದೇ ಕಾನೂನು ಅಧಿಕಾರಿಗಳನ್ನು ಸಂಪರ್ಕಿಸಬೇಕಾದಲ್ಲಿ ಮತ್ತೊಂದು ತಿಂಗಳ ಅವಧಿ ಮಾತ್ರ) ಅಭಿಯೋಜನಾ ಮಂಜೂರಾತಿಯನ್ನು ನೀಡುವ ಬಗ್ಗೆ ಅಂತಿಮ ನಿರ್ಣಯವನ್ನು ತೆಗೆದುಕೊಳ್ಳತಕ್ಕದ್ದೆಂದು ದಿನಾಂಕ: 16-07-1998 ರ ಅಧಿಕೃತ ಜ್ಞಾಪನದಲ್ಲಿ (ಉಲ್ಲೇಖ 1) ಸ್ಪಷ್ಟವಾದ ಸೂಚನೆಯನ್ನು ನೀಡಲಾಗಿದೆ. ಈ ಸೂಚನೆಯನ್ನು ವಿವಿಧ ಸಕ್ಷಮ ಪ್ರಾಧಿಕಾರಗಳು ಕಟ್ಟುನಿಟ್ಟಾಗಿ ಪಾಲಿಸದಿರುವುದು ಹಾಗೂ ಕರ್ನಾಟಕ ಲೋಕಾಯುಕ್ತದ ಪೊಲೀಸ್ ವಿಭಾಗವು ಈವರೆಗೆ ಹಲವಾರು ಪ್ರಕರಣಗಳಲ್ಲಿ ಅಭಿಯೋಜನಾ ಮಂಜೂರಾತಿಯನ್ನು ನಿರೀಕ್ಷಿಸುತ್ತಿರುವ ಸಂಗತಿಯು ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು ಮೇಲೆ ತಿಳಿಸಿರುವ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿಯನ್ನು ನೀಡುವ ಬಗ್ಗೆ ವಿಧಿಸಿರುವ 3 ತಿಂಗಳ ಕಾಲಮಿತಿಯನ್ನು **ಕಟ್ಟುನಿಟ್ಟಾಗಿ** ಪಾಲಿಸುವಂತೆ ಭ್ರಷ್ಟಾಚಾರದ ತಡೆ ಅಧಿನಿಯಮ 1988 ರ ಪ್ರಕರಣ 19 ಹಾಗೂ ದಂಡ ಪ್ರಕ್ರಿಯಾ ಸಂಹಿತೆಯ ಪ್ರಕರಣ 197 ರಡಿಯಲ್ಲಿ ಕ್ರಮ ಜರುಗಿಸಲು ಅಧಿಕಾರ ಹೊಂದಿರುವ ಪ್ರಾಧಿಕಾರಗಳಿಗೆ ಮತ್ತೊಮ್ಮೆ ಸೂಚಿಸಲಾಗಿದೆ.

**ಎಸ್.ವಿ. ರಂಗನಾಥ್**

ಪಿಆರ್.ನಂ. 2366

ಸರ್ಕಾರದ ಮುಖ್ಯ ಕಾರ್ಯದರ್ಶಿ